॥ ಶ್ರೀ ಗುರುಭ್ಯೋ ನಮಃ ಹರಿಃ ಓಂ ॥

## ಶ್ರೀ ಇಭರಾಮಪುರಾಧೀಶ ಪ್ರಕಾಶನ

ನಿತ್ಯ, ನೈಮಿತ್ತಿಕ, ಕಾಮ್ಯ ತರ್ಪಣಗಳ ಅನುಷ್ಠಾನ ಸಂಗ್ರಹ
ಋಗ್ವೇದೀಯ, ಯಜುರ್ವೇದೀಯ ವಿಧಿ ವಿಧಾನ ಸಹಿತ

# ತ ರ್ಪ ಣ ಮಂ ಜ ರೀ


ಸಂಗ್ರಹ

ಯಲಮೇಲಿ ಪುಷ್ಪಹಾಸ ಬಾಲಕೃಷ್ಣ

ಪರಿಶೀಲನೆ

ಬಿ. ಶ್ರೀನಿವಾಸ ತಂತ್ರಿಗಳು, ಎಂ.ಎ.



ಪ್ರಕಾಶಕರು

ಸಿ. ನಾರಾಯಣರಾವ್

ಸುಧೀಂದ್ರ ನಗರ

ಬೆಂಗಳೂರು – ೫೬೦೦ ೦೩

॥ ಶ್ರೀಗುರುಭ್ಯೋನಮಃ ಹರಿಃ ಓಂ ॥

॥ ಶ್ರೀಹನುಮದ್ಭೀಮಮಧ್ವಾಂತರ್ಗತ ರಾಮಕೃಷ್ಣವೇದವ್ಯಾಸಾತ್ಮಕ

ಶ್ರೀಲಕ್ಷ್ಮೀಹಯಗ್ರೀವಾಯ ನಮಃ ॥

ಶ್ರೀ ಇಭರಾಮಪುರಾಧೀಶ ಪ್ರಕಾಶನ

# ತ ರ್ಪ ಣ ಮಂ ಜ ರೀ

ಸಂಗ್ರಹ


ಯಲಮೇಲಿ ಪುಷ್ಪಹಾಸ ಬಾಲಕೃಷ್ಣ


ವಿಜಯಗುರುಗಳ ಆಶೀರ್ವಾದವಿರಲಿ

ಪರಿಶೀಲನೆ


ಬಿ. ಶ್ರೀನಿವಾಸ ತಂತ್ರಿಗಳು, ಎಂ.ಎ. 18.9.04.



ಪ್ರಕಾಶಕರು

ಸಿ. ನಾರಾಯಣರಾವ್

ಶ್ರೀ ರಾಘವೇಂದ್ರ ಪ್ರಸಾದ

ಹಳೆ ನಂ. ೫೩ ಹೊಸ ನಂ.೧೮

೬ನೇ ಅಡ್ಡರಸ್ತೆ, ಈಜುಕೊಳ ಬಡಾವಣೆ

ಸುಧೀಂದ್ರನಗರ, ಮಲ್ಲೇಶ್ವರಂ, ಬೆಂಗಳೂರು-೨

ಫೋನ್ : ೨೩೪೪೪೬೫೨

Tharpanamanjari - collection of nithya, naimithika, kamya tharpana for rigvedhi and yajurvedhi. Collected by - Sri Yalameli Pushpahasa Balakrishna of Sri Ibarapuradheesha Prakashana and Published by Sri C.Narayanarao, Sri Raghavendraprasada, 18 [ 53 ] 6 th Cross, Swimming Pool Extension Sudheendhranagara-- Bangalore. 560 003 . Telphone - 23444652. Copies : 1000. Price : Rs 30 = 00

August : 2004

ಪ್ರಥಮಾವೃತ್ತಿ – ೧೦೦೦ ಪ್ರತಿಗಳು.

ಶ್ರೀಮದಪ್ಪಾವರ ಆರಾಧನೆ. ಶ್ರಾವಣಶುದ್ಧತದಿಗೆ, ತಾರಣ ಸಂವತ್ಸರ.

ಆಗಸ್ಟ್ – ೨೦೦೪

ಬೆಲೆ : ಮೂವತ್ತು ರೂಪಾಯಿಗಳು

[ ರೂ / ೩೦ ]

ಡಿ.ಟಿ.ಪಿ.

ಯಲಮೇಲಿ ಪುಷ್ಪಹಾಸ ಬಾಲಕೃಷ್ಣ

ಮುದ್ರಕರು :

ಮಾನವ್ ಪ್ರಿಂಟ್ಸ್ # ೨೪೪ / ಬಿ, ೫೭ನೇ ಕ್ರಾಸ್,

ಮೂರನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು – ೫೬೦ ೦೧೦

॥ ಶ್ರೀ ಗುರುಭ್ಯೋ ನಮಃ ಹರಿಃ ಓಂ ॥

ಶ್ರೀವೇಂಕಟೇಶಂ ಲಕ್ಷ್ಮೀಶಂ ಅನಿಷ್ಟಘ್ನಮಭೀಷ್ಟದಮ್ ।
ಚತುರ್ಮುಖೇರತನಯಂ ಶ್ರೀನಿವಾಸಂ ಭಜೇಽನಿಶಮ್ ॥

ಹರಿನಾಮವೇ ಸ್ನಾನ । ಹರಿನಾಮವೇ ಮೌನ । ಹರಿನಾಮವೇ ಧ್ಯಾನಾ।
ಹರಿನಾಮವೇ ದಾನ । ಹರಿನಾಮವೇ ಗಾನ । ಹರಿನಾಮವೇ ಜ್ಞಾನಾ ।
ಹರಿನಾಮವೇ ಸರ್ವ ತೀರ್ಥಯಾತ್ರೆಗಳು । ಹರಿನಾಮವೇ ಕ್ರತು ।
ಹರಿನಾಮವೇ ವ್ರತ । ಹರಿನಾಮವೇ ಸಕಲ ಸಾಧನಸಂಪತ್ತು ।
ಹರಿನಾಮವೇ ಗತಿ। ಹರಿನಾಮವೇ ಮತಿ। ಹರಿನಾಮವೇ ಹಿತ ।
ಹರಿನಾಮಾಮೃತಾ । ಹರಿನಾಮ ನೆನೆಯದಿರೆ । ಶರಧಿ ಬತ್ತಿದ ಮೀನು
ವರಲಿದಂತೆ । ವರಲಿ ಹೀನರಾಗುವರು । ಹರಿನಾಮ ಒಂದು ಉಳ್ಳರೆ ।
ಬಂದ ದುರಿತ ಪರಿಹರ ಮಾಡುವನು । ಗಂಭೀರ ವಿಜಯವಿಠ್ಠಲಾ ॥



ಶ್ರೀ ಇಭರಾಮಪುರದ ಕೃಷ್ಣಾಚಾರ್ಯರು [ಅಪ್ಪಾವರು]
ಇಭರಾಮಪುರ [ಮಂತ್ರಾಲಯ]

ಶ್ರೀರಾಮಚರಣದ್ವಂದ್ವವಾರ್ಧಿಚಂದ್ರೋದಯೋಪಮಃ ।
ಶ್ರೀಕೃಷ್ಣಪೂಜಾನಿರತಃ ಕೃಷ್ಣೋ ಮಾಂ ಸರ್ವದಾಽವತು ॥

ಶ್ರಾವಣ ಶುದ್ಧ ತೃತೀಯಾ/ ತಾರಣಸಂವತ್ಸರ/ ಅಪ್ಪಾವರ ಆರಾಧನೆ-ಯಂದು ಈಸಂಗ್ರಹವನ್ನು ಶ್ರೀಮದಪ್ಪಾವರಂತರ್ಗತ ಶ್ರೀರಾಘವೇಂದ್ರ ತೀರ್ಥಾಂತರ್ಗತ ಮನುನಾಮಕ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಕೃಷ್ಣನ ಚರಣಾರವಿಂದದಲ್ಲಿ ತುಳಸೀದಳ ರೂಪದಲ್ಲಿ ಅರ್ಪಿಸಲಾಗಿದೆ.

# ಮುನ್ನುಡಿ

ಶಾಸ್ತ್ರದಲ್ಲಿ ಸಾಧಕನಾದ ಬ್ರಾಹ್ಮಣನಿಗೆ ಕರ್ಮಗಳು ಜ್ಞಾನಸಾಧಕಗಳಾಗಿ ಅವಶ್ಯವೆಂದು ಹೇಳಿದೆ. ಆ ಕರ್ಮಗಳು ಮೂರು ವಿಧ – ನಿತ್ಯ, ನೈಮಿತ್ತಿಕ, ಕಾಮ್ಯಗಳೆಂದು. ಸ್ನಾನ ಸಂಧ್ಯಾವಂದನೆ ಇತ್ಯಾದಿಗಳು ನಿತ್ಯಗಳಾಗಿದ್ದರೆ, ವ್ರತ, ಹೋಮಾದಿಗಳು ನೈಮಿತ್ತಿಕಗಳು. ಕಾಮನೆಗಳ ಸಿದ್ಧಿಗಾಗಿ ಮಾಡುವ ಕರ್ಮ ಕಾಮ್ಯ. ಈ ಕರ್ಮಗಳಲ್ಲಿ ಸ್ನಾನ, ಸಂಧ್ಯಾವಂದನೆಗಳಂತೆ ಬ್ರಹ್ಮಯಜ್ಞ, ತರ್ಪಣ, ವೈಶ್ವದೇವ, ಉಪಾಸನೆಗಳು ನಿತ್ಯಕರ್ಮಗಳಾಗಿವೆ. ಇವುಗಳನ್ನು ಗೃಹಸ್ಥನಾದವನು ನಿತ್ಯದಲ್ಲಿಯೂ ಮಾಡಬೇಕು. ಇವುಗಳಲ್ಲಿ ಇಲ್ಲಿ ತರ್ಪಣಗಳ ಅಗತ್ಯ, ವಿಧಿ, ವಿಧಾನಗಳನ್ನೂ ವಿವೇಚಿಸಲಾಗಿದೆ.

ತರ್ಪಣವೆಂದರೆ **ತೃಪ ಪ್ರೀಣನೇ, ತೃಪ ತೃಪ್ತೌ** ಧಾತು ನಿಷ್ಪನ್ನವಾದ ಶಬ್ದಕ್ಕೆ **ಸಂತೋಷಪಡಿಸುವುದು, ತೃಪ್ತಿಪಡಿಸುವುದು** ಎಂದರ್ಥ. ಸುಲಭ ಲಭ್ಯವಾದ ಜಲದಿಂದ ದೇವ, ಋಷಿ, ಪಿತೃಗಳನ್ನು **ತೃಪ್ತಿಪಡಿಸುವುದೇ ತರ್ಪಣ**ವಾಗಿದೆ. ನಾವು ಮಾಡುವ ತ್ರಿವಿಧ ಕರ್ಮಗಳಲ್ಲಿ ಈ ತರ್ಪಣವು ಸ್ನಾನಾಂಗತರ್ಪಣ, ಜಪಾಂಗತರ್ಪಣ, ಬ್ರಹ್ಮಯಜ್ಞಾಂಗತರ್ಪಣ, ಶ್ರಾದ್ಧಾಂಗತರ್ಪಣ ಇತ್ಯಾದಿಯಾಗಿ ಅನೇಕ ಪ್ರಕಾರವಾಗಿದೆ.

"ಜಾಯಮಾನೋ ಹ ವೈ ಬ್ರಾಹ್ಮಣಸ್ತ್ರಿಭಿಃ ಋಣವಾನ್ ಜಾಯತೇ । ಬ್ರಹ್ಮಚರ್ಯೇಣ ಋಷಿಭ್ಯಃ ಯಜ್ಞೇನ ದೇವೇಭ್ಯಃ ಪ್ರಜಯಾ ಪಿತೃಭ್ಯಃ ಏಷವಾನ್ ಋಣಃ"॥ ಎಂಬ ತೈತ್ತಿರೀಯಸಂಹಿತಾ ವಾಕ್ಯದಂತೆ ಜನ್ಮ ಮಾತ್ರದಿಂದಲೇ ಬ್ರಾಹ್ಮಣನಿಗೆ ಋಷಿಋಣ, ದೇವಋಣ ಹಾಗೂ ಪಿತೃಋಣ ಎಂದು ಮೂರು ವಿಧವಾದ ಋಣ[ಸಾಲ]ವುಂಟಾಗುತ್ತದೆ. ಈ ಋಣಪರಿಹಾರಕ್ಕಾಗಿ ಬ್ರಾಹ್ಮಣನಾದವನು ಗುರುಕುಲದಲ್ಲಿ ಬ್ರಹ್ಮಚರ್ಯವ್ರತದಿಂದ ವೇದಶಾಸ್ತ್ರಾಭ್ಯಾಸ ನಡೆಸಿ ತತ್ತ್ವಜ್ಞಾನವನ್ನು ಗಳಿಸಬೇಕು, ಹಾಗೂ ಅಧ್ಯಾಪನದ ಮೂಲಕ ಜ್ಞಾನಪರಂಪರೆಯನ್ನು ಬೆಳೆಸಬೇಕು. ಹೀಗೆ ಋಷಿಋಣವನ್ನು ಪರಿಹರಿಸಿ ಕೊಳ್ಳಬೇಕು. ಹಾಗೆಯೇ ಸವರ್ಣಳಾದ ಯೋಗ್ಯಕನ್ಯೆಯನ್ನು ಬ್ರಾಹ್ಮಪದ್ಧತಿಯಿಂದ ವಿವಾಹವಾಗಿ ಗೃಹಸ್ಥಾಶ್ರಮಿಯಾಗಿ ಸತ್ಸಂತತಿಯನ್ನು ಅಭಿವೃದ್ಧಿಪಡಿಸಬೇಕು. ಹಾಗೆಯೇ ಪಿತೃಗಳ ಔರ್ಧ್ವದೇಹಿಕ ಕ್ರಿಯೆಗಳನ್ನು ಮಾಡಿ ಸಾಂವತ್ಸರಿಕ ಮತ್ತು ಗಯಾಶ್ರಾದ್ಧಾದಿ ಕ್ರಿಯೆಗಳನ್ನೂ ಮಾಡಿ ಪಿತೃಋಣವನ್ನು ಪರಿಹರಿಸಿಕೊಳ್ಳಬೇಕು.

ಹೀಗೆ ನಿತ್ಯ, ನೈಮಿತ್ತಿಕ, ಕಾಮ್ಯಕರ್ಮಗಳನ್ನು ಪರಿಭಕ್ತಿಯಿಂದಲೇ ಮಾಡಬೇಕು. ಇದನ್ನು ಭಗವದ್ಗೀತೆಯಲ್ಲಿ "ದೇವಾನ್ ಭಾವಯತಾನೇನ ತೇ ದೇವಾಃ ಭಾವಯಂತು ವಃ । ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ"॥ ಎಂದು [ಅಧ್ಯಾಯ-೩-೧೧ರಲ್ಲಿ] ಶ್ರೀಕೃಷ್ಣ ಸಜ್ಜನರಿಗೆ ಆದೇಶಿಸಿದ್ದಾನೆ. ಇದರಿಂದ ಭಗವಂತನ ಅನುಗ್ರಹವಾಗಿ ಜ್ಞಾನ ಸಿದ್ಧಿಸುತ್ತದೆ.

ಈ ದಿಶೆಯಲ್ಲಿ ತರ್ಪಣವೂ ಅಗತ್ಯವಾಗಿದೆ. ತೀರ್ಥಜಲದೊಡನೆ ಪಿತೃಗಳನ್ನು ತಿಲತರ್ಪಣದಿಂದ ತೃಪ್ತಿಪಡಿಸಬೇಕು. ಈ ಕ್ರಿಯೆಯೇ ತರ್ಪಣ. ಇದನ್ನು ಹೇಗೆ ನಾವು ಆಚರಿಸಬೇಕು ಎಂಬ ಸಮಗ್ರ ಮಾಹಿತಿಗಳನ್ನೊಳಗೊಂಡ "**ತರ್ಪಣಮಂಜರೀ**" ಎಂಬ ಸಂಗ್ರಾಹ್ಯ ಪುಸ್ತಕವನ್ನು ನನ್ನ ಶಿಷ್ಯರಾದ ಶ್ರೀ ಯಲಮೇಲಿ ಪುಷ್ಪಹಾಸ ಬಾಲಕೃಷ್ಣರವರು ಸಂಗ್ರಹಿಸಿ ನೀಡುತ್ತಿದ್ದಾರೆ. ಸಜ್ಜನರು ಇದನ್ನು ಓದಿ ತಿಳಿದು ತಮ್ಮ ಜೀವನದಲ್ಲಿ ಶಾಸ್ತ್ರೀಯಕ್ರಮದಿಂದ ತರ್ಪಣಕ್ರಿಯೆಯನ್ನು ಅನುಷ್ಠಾನ ಮಾಡುತ್ತಾ ಬಂದರೆ ಬಾಲಕೃಷ್ಣರವರ ಶ್ರಮ ಸಾರ್ಥಕವೇ ಸರಿ. ಉತ್ತಮವಾದ ಜ್ಞಾನಕಾರ್ಯವನ್ನು ಮಾಡುವ ಬಾಲಕೃಷ್ಣರವರಿಗೆ ಶ್ರೀವೇದವ್ಯಾಸಾತ್ಮಕ ಶ್ರೀಉಡುಪಿ ಕೃಷ್ಣನು ಇನ್ನೂ ಹೆಚ್ಚಿನ ಜ್ಞಾನಸಂಪತ್ತನ್ನು ನೀಡಿ ಜ್ಞಾನಕಾರ್ಯವನ್ನು ನಡೆಸುವ ಸಾಮರ್ಥ್ಯವನ್ನು ನೀಡಲೆಂದು ನಾವು ಭಕ್ತಿಯಿಂದ ಪ್ರಾರ್ಥಿಸುತ್ತೇವೆ. ಹಾಗೆಯೇ ಈ ಗ್ರಂಥವನ್ನು ಸಜ್ಜನರ ಉಪಯೋಗಕ್ಕಾಗಿ ಪ್ರಕಾಶಪಡಿಸುತ್ತಿರುವ ಶ್ರೀಯುತ ಸಿ. ನಾರಾಯಣರಾವ್ ಇವರ ತ್ಯಾಗ ಹಾಗೂ ಧರ್ಮನಿಷ್ಠೆಯನ್ನು ತುಂಬಾ ಸ್ಮರಿಸಬೇಕಾಗಿದೆ. ಅವರಿಗೂ ಭಗವಂತನು ಇನ್ನೂ ಹೆಚ್ಚಿನ ಜ್ಞಾನಕಾರ್ಯ ನಡೆಸಲು ಆಯುರಾರೋಗ್ಯಭಾಗ್ಯವನ್ನು ಕರುಣಿಸಲೆಂದು ಭಗವಂತನನ್ನು ಭಕ್ತಿಯಿಂದ ಪ್ರಾರ್ಥಿಸುತ್ತೇವೆ.

ನ್ಯಾಯವೇದಾಂತ ವಿದ್ವಾನ್ ಬಿ. ಶ್ರೀನಿವಾಸತಂತ್ರಿ
ದ್ವೈತವೇದಾಂತ ಮುಖ್ಯಪ್ರಾಧ್ಯಾಪಕರು
ಚಾಮರಾಜೇಂದ್ರ ಸಂಸ್ಕೃತ ಮಹಾಪಾಠಶಾಲೆ
ಬೆಂಗಳೂರು

ದಿನಾಂಕ
೧೮-೮-೨೦೦೪

# ಪ್ರಕಾಶಕರ ನಿವೇದನೆ.

ನಾನು ಶ್ರೀ ಕೃಷ್ಣಾವಧೂತರ ಶ್ರೀ ರಾಘವೇಂದ್ರತಂತ್ರವನ್ನು ಅರ್ಥಸಹಿತ ಪ್ರಕಟಿಸಬೇಕೆಂದು ಪ್ರಯತ್ನಿಸಿದಾಗ, ಅದರ ಬದಲು "*ಪಂಚಸ್ತುತಿ*" ಪುಸ್ತಕವನ್ನು ೧೯೯೮ರ ಏಪ್ರಿಲ್‌ನಲ್ಲಿ ಪ್ರಕಟಿಸುವಂತೆ ಆಯಿತು. ಇದಾದಮೇಲೆ ತರ್ಪಣದ ವಿಚಾರವಾಗಿ ಒಂದು ಸಣ್ಣ ಪುಸ್ತಕ ಪ್ರಕಟಿಸಬೇಕೆಂಬ ಆಸೆ ಹುಟ್ಟಿತು. ಈ ವಿಚಾರವಾಗಿ ಈಗಾಗಲೇ ಹಲವಾರು ಪುಸ್ತಕಗಳು ಪ್ರಕಟವಾಗಿವೆ. ಆದರೂ ಒಂದು ಪುಸ್ತಕದಲ್ಲಿ ಇನ್ನೂ ವಿಶೇಷ ವಿಚಾರಗಳನ್ನು ಸಂಗ್ರಹಿಸಿ ಸಾಧ್ಯವಾದಷ್ಟು ಮಟ್ಟಿಗೆ ಆಧಾರಗಳನ್ನು ಒದಗಿಸಿಕೊಡಬೇಕೆಂದು ಅಪೇಕ್ಷಿಸಿದೆ. ನನಗೆ ಸಂಸ್ಕೃತದ ಪರಿಚಯ ಹೆಚ್ಚು ಇಲ್ಲವಾದುದರಿಂದಲೂ, ಆಕರ ಗ್ರಂಥಗಳೆಲ್ಲಾ ಸಂಸ್ಕೃತದಲ್ಲೇ ಇದ್ದುದರಿಂದಲೂ ಸಂಸ್ಕೃತ ಬಲ್ಲ ಮತ್ತು ಈ ವಿಚಾರದಲ್ಲಿ ಆಸಕ್ತಿಯುಳ್ಳ ವ್ಯಕ್ತಿಯನ್ನು ಹುಡುಕುತ್ತಿದ್ದಾಗ ದೈವಸಂಯೋಗದಿಂದ ಶ್ರೀ ಯಲಮೇಲಿ ಪುಷ್ಪಹಾಸ ಬಾಲಕೃಷ್ಣ ಅವರ ಭೇಟಿಯಾಯಿತು, ಅದೂ ಸಹ ಅವರು ಶ್ರೀ ಕೃಷ್ಣಾವಧೂತರ ಶ್ರೀ ರಾಘವೇಂದ್ರತಂತ್ರದ ಶುದ್ಧಪ್ರತಿಯೊಂದನ್ನು ಪ್ರಕಟಿಸಬೇಕೆಂದು ಪ್ರಯತ್ನಿಸುತ್ತಿದ್ದಂತಹ ಸಂದರ್ಭದಲ್ಲಿ.

ಮೊದಲನೆಯ ಭೇಟಿಯಲ್ಲಿಯೇ ಅವರು ಸಹೃದಯರು, ತಮ್ಮ ಹತ್ತಿರ ಇರುವ ಜ್ಞಾನವನ್ನು ಇನ್ನೊಬ್ಬರ ಜೊತೆ ಹಂಚಿಕೊಳ್ಳುವುದರಲ್ಲಿ ವಂಚನೆ ಮಾಡದವರು ಎಂದು ನನಗೆ ಮನದಟ್ಟಾಯಿತು. ಅವರ ಹತ್ತಿರ ಈ ವಿಚಾರವಾಗಿ ವಿಷಯ ಸಂಗ್ರಹ ಮಾಡಿಕೊಡಲು ಕೇಳಿಕೊಂಡೆ. ಅದರ ಫಲವೇ ಈ "***ತರ್ಪಣಮಂಜರೀ***" ಎಂಬ ಪುಸ್ತಕ. ಹಲವು ಮೂಲಗಳಿಂದ ವಿಚಾರ ಸಂಗ್ರಹ ಮಾಡಿ ಈ ಪುಸ್ತಕ ಬರೆದಿದ್ದಾರೆ. ಈ ಪುಸ್ತಕದ ಪ್ರಕಟಣೆಗೆ ನಾನು ಅವರಲ್ಲಿ ಆಶೆ ವ್ಯಕ್ತಪಡಿಸಿದ್ದು ಬಿಟ್ಟರೇ, ನನ್ನಿಂದ ಹೆಚ್ಚಿನ ಕೆಲಸವಾಗಿಲ್ಲ. ಮೊದಲಿನಿಂದ ಕೊನೆಯವರೆಗೂ ಜವಾಬ್ದಾರಿಯನ್ನು ವಹಿಸಿಕೊಂಡು ಇದರ ಪ್ರಕಟಣೆಗೆ ಕಾರಣಕರ್ತರಾಗಿದ್ದಾರೆ. ವಿಷಯಸಂಗ್ರಹಣೆ ಎಂದರೆ ಸುಲಭವಾದ ಕಾರ್ಯವಲ್ಲ. ಯಾವುದಾದರೂ ಒಂದು ಉದಾಹೃತ ಶ್ಲೋಕ ಸಿಕ್ಕಿದರೆ ಅದು ಯಾವ ಗ್ರಂಥದಲ್ಲಿದೆ ಎಂಬುದನ್ನು ಊಹಿಸಿ ಆ ಗ್ರಂಥ ಹುಡುಕಿ ಆ ಶ್ಲೋಕ ಸರಿಯಾಗಿದೆಯೆ ನೋಡಬೇಕು. ಬರೀ ಗ್ರಂಥದ ಹೆಸರು ತಿಳಿದರೆ ಸಾಲದು, ಮೊದಲಿನಿಂದ ಕೊನೆಯವರೆಗೂ ಆ ಗ್ರಂಥವನ್ನು ಹುಡುಕಬೇಕು. ಗ್ರಂಥ ನಮ್ಮ

ಹತ್ತಿರವಿದ್ದರೆ ಪರವಾಗಿಲ್ಲ. ಇಲ್ಲದಿದ್ದರೆ ಆ ಗ್ರಂಥದ ಹುಡುಕಾಟದಲ್ಲಿಯೇ ಕಾಲ ಕಳೆದುಹೋಗುತ್ತದೆ. ಇಂತಹ ಪ್ರಕಟನೆಯು ಹೆಚ್ಚಿನ ಕಾಲವನ್ನು ತೆಗೆದುಕೊಳ್ಳುತ್ತದೆ. ಹೀಗಾಗಿ ಶ್ರೀ ಬಾಲಕೃಷ್ಣರವರು ಆಕರಗಳನ್ನು ಹುಡುಕುವುದರಲ್ಲಿ, ಆಕರಗ್ರಂಥಗಳನ್ನು ಸಂಪಾದಿಸುವುದರಲ್ಲಿ ಎಷ್ಟು ಸಮಯ ತೆಗೆದುಕೊಂಡಿದ್ದಾರೆ ಎಂಬುದನ್ನು ವಾಚಕರು ಊಹಿಸಬಹುದು. ಇದರೊಂದಿಗೆ ಡಿ.ಟಿ.ಪಿ. ಕೆಲಸವನ್ನೂ ಅವರೇ ಮಾಡಿದ್ದಾರೆ. ಅವರ ಈ ಸಹಾಯಕ್ಕೆ ನಾನು ಕೃತಜ್ಞತೆಯನ್ನು ಮಾತ್ರ ಸಲ್ಲಿಸಬಲ್ಲೆನೇ ಹೊರತು ಬೇರೆ ಏನೂ ಮಾಡಲಾರೆ. ದೇವರು ಅವರಿಗೆ ದೀರ್ಘಾಯುಷ್ಯವನ್ನು ಕೊಟ್ಟು, ಜ್ಞಾನ, ಭಕ್ತಿ, ವೈರಾಗ್ಯಗಳನ್ನು ದಯಪಾಲಿಸಲಿ ಎಂದು ಬೇಡುತ್ತೇನೆ.

ಕರಡುಪ್ರತಿ ತಯಾರಾಗುವ ಹಂತದಲ್ಲಿ, ತಯಾರಾದ ಮೇಲೆ ಹಂತಹಂತದಲ್ಲಿ ಪರಿಶೀಲಿಸಿ ಸೂಕ್ತಸಲಹೆ ಕೊಟ್ಟ ಮತ್ತು ಈ ಸಂಗ್ರಹಕ್ಕಾಗಿ ಮುನ್ನುಡಿಯನ್ನು ಬರೆದುಕೊಟ್ಟ ಶ್ರೀಚಾಮರಾಜೇಂದ್ರ ಸಂಸ್ಕೃತ ಮಹಾಪಾಠಶಾಲೆಯ ದ್ವೈತ ವೇದಾಂತದ ಮುಖ್ಯಪ್ರಾಧ್ಯಾಪಕರಾದ ಮ॥ಶಾ॥ಸಂ॥ರಾದ ನ್ಯಾಯ ವೇದಾಂತ ವಿದ್ವಾನ್ ಶ್ರೀ ಬಿ. ಶ್ರೀನಿವಾಸತಂತ್ರಿಗಳಿಗೆ ನಾನು ಕೃತಜ್ಞನಾಗಿದ್ದೇನೆ.

ವಾಸುದೇವಪದಸಂತತಸಂಗಿಯ ಶ್ರೀಶಮೂರ್ತಿಗಳು ಈ ಪುಸ್ತಕ ರೂಪು ಗೊಳ್ಳುವಲ್ಲಿ ಉಪಯುಕ್ತ ಸಲಹೆಗಳನ್ನು ನೀಡಿದ್ದಾರೆ. ಅವರಿಗೂ ನಾನು ಕೃತಜ್ಞನಾಗಿದ್ದೇನೆ.

ಸಕಾಲದಲ್ಲಿ ಮುದ್ರಿಸಿದ ಮಾನವ್ ಪ್ರಿಂಟ್ಸ್‌ನ ಸಂಜಯ್. ವಿ. ಕುಲಕರ್ಣಿಯವರಿಗೆ ಅಭಿನಂದನೆಗಳು.

ಸಹೃದಯರಾದ ವಾಚಕರು ಈ ಸಂಗ್ರಹವನ್ನು ಆದರದಿಂದ ಸ್ವೀಕರಿಸಿದರೆ ನನ್ನ ಮತ್ತು ಶ್ರೀ ಬಾಲಕೃಷ್ಣರವರ ಶ್ರಮ ಸಾರ್ಥಕವಾಗುತ್ತದೆ.

| | |
|---|---|
| ಶ್ರೀಅಪ್ಪಾವರ ಆರಾಧನೆ | ಪ್ರಕಾಶಕ |
| ನಿಜ ಶ್ರಾವಣ ತೃತೀಯಾ | **ಸಿ . ನಾರಾಯಣರಾವ್** |
| ತಾರಣ ಸಂವತ್ಸರ | ಬೆಂಗಳೂರು – ೩ |
| ೧೮–೮–೨೦೦೪ | ದೂರವಾಣಿ : ೨೩೪೪೪೬೫೨. |

ಅನವದ್ಯಾತ್ಮಚಾರಿತ್ರ್ಯಂ ವಾದಿಖದ್ಯೋತ ಭಾಸ್ಕರಮ್ ।
ವಿದ್ಯಾಮಾನ್ಯಗುರುಂ ವಂದೇ ವಿದ್ಯಾವಿದ್ಯೋತ ಭಾಸ್ವರಮ್ ॥
ವಿದ್ಯಾವಿನಯ ಸಂಪನ್ನಾನ್ ಶಾಂತ್ಯಾದಿಗುಣಬೃಂಹಿತಾನ್ ।
ಸಚ್ಛಾಸ್ತ್ರ ಪ್ರವಚನಾಸಕ್ತಾನ್ ಯಲಮೇಲಾರ್ಯಾನ್ ಗುರೂನ್ ಭಜೇ ॥

# *ಸಂಗ್ರಹಕಾರನ ನಿವೇದನೆ*

ಅಪರೋಕ್ಷೀಕೃತಶ್ರೀಶರಾದ ಶ್ರೀ ಇಭರಾಮಪುರದ ಶ್ರೀಮದಪ್ಪಾವರ [ಶ್ರೀ ಇಭರಾಮಪುರದ ಕೃಷ್ಣಾಚಾರ್ಯರು. ಕ್ರಿ.ಶ. ೧೭೮೯-೧೮೬೯. ] ಅನುಗ್ರಹದಿಂದ ಪ್ರಕೃತ "**ತರ್ಪಣಮಂಜರೀ**" ಎಂಬ ಈ ಸಂಗ್ರಹವು ಪ್ರಕಟವಾಗುತ್ತಿದೆ. ಈ ಕಾರ್ಯದಲ್ಲಿ ನಾನು ನಿಮಿತ್ತಮಾತ್ರ. ಈ ಸಂಗ್ರಹಕ್ಕೆ ಪ್ರೇರಣೆ ನೀಡಿದವರು ಹಿರಿಯ ವಯಸ್ಸಿನಲ್ಲೂ ಸಾಧನೆಯ ತುಡಿತವಿರುವ ಶ್ರೀಯುತ ಸಿ. ನಾರಾಯಣರಾವ್‌ರವರು.

ನಾನು ಶ್ರೀ ಇಭರಾಮಪುರ ಪ್ರಕಾಶನದಿಂದ ಶ್ರೀ ಕೃಷ್ಣಾವಧೂತರ ಶ್ರೀ ರಾಘವೇಂದ್ರತಂತ್ರವನ್ನು ಪ್ರಕಟಿಸಲು ಪ್ರತಿಯ ಹುಡುಕಾಟದಲ್ಲಿದ್ದಾಗ ಸುಮಾರು ೮೫ ವರ್ಷದಷ್ಟು ಹಳೆಯದಾದ ಪ್ರತಿಯನ್ನು ಶ್ರೀಯುತ ಸ್ವಾಮಿರಾವ್ ಕುಲಕರ್ಣಿಯವರಿಂದ ಶ್ರೀಯುತ ಸಿ. ನಾರಾಯಣರಾವ್‌ರವರು ಕೊಡಿಸಿದರು. ಆ ಸಂದರ್ಭದಲ್ಲಿ ತರ್ಪಣದ ವಿಚಾರವಾಗಿ ಒಂದು ಪುಸ್ತಕವನ್ನು ಪ್ರಕಟಿಸಲು ಆಶೆ ವ್ಯಕ್ತಪಡಿಸಿ ತಮ್ಮ ಸಂಗ್ರಹದಲ್ಲಿದ್ದ ಈ ವಿಷಯಕ್ಕೆ ಸಂಬಂಧಿಸಿದ ಮಾಹಿತಿಯನ್ನು ಮತ್ತು ಪುಸ್ತಕಗಳನ್ನು ನೀಡಿ, ನೀವು ಪೂರ್ಣ ಮಾಡಿಕೊಡಿ ಎಂದು ಕೇಳಿದರು . ಹೆಸರಿಗೆ ಅಲ್ಪಸ್ವಲ್ಪ ಶಾಸ್ತ್ರಾಭ್ಯಾಸ ಮಾಡಿದ ನನ್ನಿಂದ ಇದು ಸಾಧ್ಯವೇ ಎನಿಸಿತು! ಆಗ ನನಗೆ ಪಾಠ ಹೇಳುತ್ತಿರುವ ಶ್ರೀಚಾಮರಾಜೇಂದ್ರ ಸಂಸ್ಕೃತ ಮಹಾಪಾಠಶಾಲೆಯ ದ್ವೈತವೇದಾಂತದ ಮುಖ್ಯಪ್ರಾಧ್ಯಾಪಕರಾದ ಮ॥ಶಾ॥ಸಂ॥ ರಾದ ಪೂಜ್ಯಗುರುಗಳಾದ ವಿದ್ವಾನ್ ಶ್ರೀ ಬಿ. ಶ್ರೀನಿವಾಸತಂತ್ರಿಗಳನ್ನು ಈ ಕೆಲಸಕ್ಕೆ ಬೆನ್ನೆಲುಬಾಗಿ ನಿಂತು ನಡೆಸಿಕೊಡಬೇಕೆಂದು ಪ್ರಾರ್ಥಿಸಿದೆ. ಕರಡು ತಿದ್ದುವುದರಿಂದ ಹಿಡಿದು, ಅರ್ಥವಾಗದ ಅನೇಕ ಭಾಗಗಳಿಗೆ ಅರ್ಥ ತಿಳಿಸಿ ಈ ಕೆಲಸ ಪೂರ್ಣವಾಗಲು ಅವರು ಕಾರಣಕರ್ತರಾಗಿದ್ದಾರೆ. ಆದ್ದರಿಂದ ಶ್ರೀಯುತ ಸಿ. ನಾರಾಯಣರಾವ್‌ರವರ ಪ್ರೇರಣೆ ಹಾಗೂ ಪೂಜ್ಯ ಗುರುಗಳ ಮಾರ್ಗ ದರ್ಶನದಿಂದ ಈ ಸಂಗ್ರಹ ಪ್ರಕಟವಾಗುತ್ತಿದೆ. ಈ ಸಂಗ್ರಹವನ್ನು "ಶ್ರೀಇಭರಾಮಪುರ ಪ್ರಕಾಶನ"ದ ಅಡಿಯಲ್ಲಿ ಪ್ರಕಟಿಸಲು ಶ್ರೀಯುತ

ಸಿ. ನಾರಾಯಣರಾವ್‌ರವರು ಅನುಮತಿ ನೀಡಿ ಪ್ರಕಟನೆಯ ವೆಚ್ಚವನ್ನೆಲ್ಲಾ ತಾವೇ ಭರಿಸಿದ್ದಾರೆ. ಈ ಇಬ್ಬರಿಗೂ ಹಾಗೂ ಈ ಸಂಗ್ರಹಕ್ಕೆ ಪೂರಕವಾದ ಸಾಹಿತ್ಯ ನಿರ್ಮಿಸಿದ ಸುಮಾರು ೯೬ ಗ್ರಂಥಕಾರರಿಗೆ ನಾನು ಋಣಿಯಾಗಿ ಅವರೆಲ್ಲರಿಂದ ಉಪಕೃತನಾಗಿದ್ದೇನೆ.

ಬ್ರಹ್ಮಯಜ್ಞಾಂಗ ಋಷಿ ಹಾಗೂ ಆಚಾರ್ಯತರ್ಪಣ ಎರಡೂ ಕಡೆಗಳಲ್ಲಿ ಭರದ್ವಾಜಂ ತರ್ಪಯಾಮಿ ಎಂದು ಭರದ್ವಾಜರನ್ನು ಪ್ರಸಿದ್ಧವಾದ ಆಹ್ನೀಕ ಪುಸ್ತಕವೊಂದರಲ್ಲಿ ಉಲ್ಲೇಖಿಸಲಾಗಿದೆ, ಆದರೆ ಆಶ್ವಲಾಯನರು ಗೃಹ್ಯಸೂತ್ರ ಮೂಲದಲ್ಲಿ ಋಷಿತರ್ಪಣದಲ್ಲಷ್ಟೇ ಭರದ್ವಾಜರನ್ನು ಗಣಿಸಿದ್ದಾರೆ. ದಯಮಾಡಿ ತಿಳಿದವರು ಈ ವಿಷಯದ ಬಗ್ಗೆ ಬೆಳಕು ಚೆಲ್ಲಬೇಕಾಗಿ ಪ್ರಾರ್ಥನೆ. ಈ ಸಂಗ್ರಹದಲ್ಲಿ ಆಚಾರ್ಯ ತರ್ಪಣದಲ್ಲಿ ಭರದ್ವಾಜರನ್ನು ಈ ಕಾರಣದಿಂದ ಕಂಸದಲ್ಲಿ [ಪುಟ೩೭ರಲ್ಲಿ] ನೀಡಲಾಗಿದೆ.

**ಅನೇಕ ಸಂದರ್ಭದಲ್ಲಿ ವಿಷಯಗಳು ಸ್ಪಷ್ಟತೆಗಾಗಿ ಪುನರುಕ್ತವಾಗಿವೆ.** ನಾನು ಈ ಸಂಗ್ರಹದಲ್ಲಿ ಅನೇಕ ಮೂಲಗಳಿಂದ ವಿಷಯಸಂಗ್ರಹ ಮಾಡಿರುವುದರಿಂದ ವಿಷಯ ಸಂಗ್ರಹಣೆಯಲ್ಲಿ ವ್ಯತ್ಯಾಸ ಇತ್ಯಾದಿ ದೋಷಗಳಿದ್ದರೆ ಕ್ಷಮಿಸಿ ತಿದ್ದಿ ತಿಳಿಸಬೇಕಾಗಿ ಪ್ರಾರ್ಥನೆ.

ಈ ಸಂಗ್ರಹದಿಂದ ಜನ್ಮಕೊಟ್ಟವರ, [ಪಿತೃಋಣ], ಸಹಾಯಕ ಗ್ರಂಥನಿರ್ಮಿಸಿದವರ, ಮತ್ತು ನನಗೆ ವಿದ್ಯಾಕಲಿಸಿದವರ, [ಋಷಿ ಋಣ] ಹಾಗೂ ನನ್ನಲ್ಲಿ ನಿಂತು ಈ ಕಾರ್ಯ ನಡೆಸಿದವರ [ ದೇವಋಣ] ಅಲ್ಪವಾಗಿ ಸಂದಾಯವಾದರೆ ನಾನು ಕೃತಾರ್ಥನಾದಂತೆ. ಮನುನಾಮಕಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಕೃಷ್ಣಾರ್ಪಣಮಸ್ತು.

***॥ ವೈಷ್ಣವಾ ವಿಷ್ಣುಹೃದಯಾಃ ತಾನ್ನಮಸ್ಯೇಗುರೂನ್ಮಮ ॥***
***ವಿಷ್ಣುಹೃದಯರಾದ ವೈಷ್ಣವರೆಲ್ಲ ನನ್ನ ಗುರುಗಳು,***
***ಅವರೆಲ್ಲರಿಗೂ ನಮಸ್ಕಾರವು.***

**ಶ್ರೀಮದಪ್ಪಾವರ ಆರಾಧನೆ**
ನಿಜ ಶ್ರಾವಣ ತೃತೀಯಾ
ತಾರಣ ಸಂವತ್ಸರ
೧೮-೮-೨೦೦೪

**ಯಲಮೇಲಿ ಪುಷ್ಪಹಾಸ ಬಾಲಕೃಷ್ಣ**
ಬೆಂಗಳೂರು

# ವಿಷಯಾನುಕ್ರಮಣಿಕೆ

ಪುಟ ಸಂಖ್ಯೆ

॥ ಶ್ರೀಗುರುಭ್ಯೋನಮಃ ಹರಿಃ ಓಂ ॥
ಯೋಽಂತಃಪ್ರವಿಶ್ಯಮಮವಾಚಮಿಮಾಂ ಪ್ರಸುಪ್ತಾಂ ಸಂಜೀವಯತ್ಯಖಿಲ
ಶಕ್ತಿಧರಃ ಸ್ವಧಾಮ್ನಾ । ಅನ್ಯಾಂಶ್ಚ ಹಸ್ತಚರಣಶ್ರವಣತ್ವಗಾದೀನ್
ಪ್ರಾಣಾನ್ ನಮೋ ಭಗವತೇ ಪುರುಷಾಯ ತುಭ್ಯಮ್ ॥

# ತರ್ಪಣಮಂಜರೀ

## ೧. ತರ್ಪಣದ ಆವಶ್ಯಕತೆ .

"ಜಾಯಮಾನೋ ಹ ವೈ ಬ್ರಾಹ್ಮಣಸ್ತ್ರಿಭಿಃ ಋಣವಾನ್ ಜಾಯತೇ । ಬ್ರಹ್ಮಚರ್ಯೇಣ ಋಷಿಭ್ಯಃ ಯಜ್ಞೇನ ದೇವೇಭ್ಯಃ ಪ್ರಜಯಾ ಪಿತೃಭ್ಯಃ ಏಷವಾನ್ ಋಣಃ ॥ " – ತೈತ್ತಿರೀಯ ಸಂಹಿತಾ [೬–೩–೧೦]. ದ್ವಿಜನು ಹುಟ್ಟುವಾಗಲೇ ಮೂರು ಋಣವುಳ್ಳವನಾಗಿ ಹುಟ್ಟುತ್ತಾನೆ. ವೇದಾಧ್ಯಯನ [ಬ್ರಹ್ಮಚರ್ಯ]ದಿಂದ ಋಷಿಋಣ, ಯಜ್ಞಗಳಿಂದ ದೇವಋಣ, ಸಂತಾನದಿಂದ ಪಿತೃಋಣದಿಂದ ಮುಕ್ತನಾಗುತ್ತಾನೆ ಎಂದು ತೈತ್ತಿರೀಯಶ್ರುತಿ ಹೇಳುತ್ತದೆ.

ವಿಷ್ಣುಧರ್ಮೋತ್ತರದಲ್ಲಿಯ ಈ ಮಾತುಗಳು ಈ ಶ್ರುತಿಯ ತಾತ್ಪರ್ಯವನ್ನೇ ಇನ್ನೂ ಹೆಚ್ಚು ಸ್ಪಷ್ಟಪಡಿಸುತ್ತದೆ. ಅವು ಈ ರೀತಿಯಾಗಿವೆ – ಮನುಷ್ಯನು ದೇವತೆಗಳ, ಪಿತೃಗಳ ಮತ್ತು ಋಷಿಗಳ ಋಣದೊಂದಿಗೇ ಹುಟ್ಟುತ್ತಾನೆ. ಆದ್ದರಿಂದ ಈ ಋಣಗಳಿಂದ ಬಿಡುಗಡೆ ಹೊಂದಲು ಪ್ರಯತ್ನಿಸಬೇಕು. ಹೇಗೆಂದರೆ ಸಾಂಗವೇದಾಧ್ಯಯನ, ಅಧ್ಯಾಪನ [ಬ್ರಹ್ಮಚರ್ಯೆ], ಶಾಸ್ತ್ರಾಭ್ಯಾಸ ಹಾಗೂ ತಪಸ್ಸಿನಿಂದ ಋಷಿಋಣವನ್ನೂ, ಶ್ರಾದ್ಧಾಚರಣೆ ಮತ್ತು ಸಂತಾನದಿಂದ ಪಿತೃಋಣವನ್ನೂ, ಯಜ್ಞದಿಂದ ದೇವಋಣವನ್ನೂ, ಯಜ್ಞಯಾಗಾದಿಗಳನ್ನು ನಡೆಸಲು ಅಶಕ್ತನಾಗಿದ್ದರೆ ವ್ರತೋಪವಾಸಗಳಿಂದಲಾದರೂ ದೇವಋಣವನ್ನು ಕಳೆದುಕೊಳ್ಳಲು ಪ್ರಯತ್ನಿಸಬೇಕೆನ್ನುತ್ತದೆ. [ದೇವಾನಾಂ ಚ ಪಿತೄಣಾಂ ಚ ಋಷೀಣಾಂ ಚ ತಥಾ ನರಃ । ಋಣವಾನ್ ಜಾಯತೇ ಯಸ್ಮಾತ್ತನ್ಮೋಕ್ಷೇ ಪ್ರಯತ್ನೇನ್ನರಃ ॥ ಹಾಗೂ ದೇವಾನಾಮನೃಣೋ ಜಂತುರ್ಯಜ್ಞೈರ್ಭವತಿ ಮಾನವಃ । ಅಲ್ಪ ವಿತ್ತಶ್ಚ ಪೂಜಾಭಿರುಪವಾಸವ್ರತೈಸ್ತಥಾ ॥ ಶ್ರಾದ್ಧೇನ ಪ್ರಜಯಾ ಚೈವ ಪಿತೄಣಾಮನೃಣೋ ಭವೇತ್ । ಋಷೀಣಾಂ ಬ್ರಹ್ಮಚರ್ಯೇಣ ಶ್ರುತೇನ ತಪಸಾ ತಥಾ ॥ ವಿಷ್ಣುಧರ್ಮೋತ್ತರ ಪುರಾಣ]

ವಿಷ್ಣುಪುರಾಣವು ದೇವ ಋಷಿ ಪಿತೃ ಪೂಜಾ ತರ್ಪಣಗಳು ಹಾಗೂ

ಅತಿಥಿಸತ್ಕಾರ ಮಾಡುವವನು, ಯಾರೋ ಅವನು ಉತ್ತಮಲೋಕವನ್ನು ಹೊಂದುತ್ತಾನೆ ಎಂದಿದೆ. [ದೇವರ್ಷಿ ಪೂಜಕಸ್ಸಮ್ಯಕ್ ಪಿತೃಪಿಂಡೋದಕ ಪ್ರದಃ। ಸತ್ಕರ್ತಾಚಾತಿಥೀನಾಂ ಯಃ ಸಲೋಕಾನುತ್ತಮಾನ್ ವ್ರಜೇತ್ ॥ ವಿಷ್ಣುಪುರಾಣ ತೃತೀಯಾಂಶ ಅಧ್ಯಾಯ–೧೨]. ಈ ಮೇಲಿನಂತೆ ದೇವ ಋಷಿ ಪಿತೃಋಣವನ್ನು ಪರಿಹರಿಸಲು ತರ್ಪಣಕ್ರಿಯೆಯು ದ್ವಿಜನಿಗೆ ವಿಧಿಸಲ್ಪಟ್ಟಿದೆ. ಈ ತರ್ಪಣ ಮಾಡ ದಿದ್ದರೆ ಆಗುವ ಅನರ್ಥವನ್ನು "ದೇವತಾಶ್ಚ ಪಿತೄಂಶ್ಚೈವ ಮುನೀನ್ವಾ ಯೋ ನ ತರ್ಪಯೇತ್। ದೇವಾದೀನಾಮೃಣೀ ಭೂತ್ವಾ ನರಕಂ ಪ್ರತಿಪದ್ಯತೆ "॥ ದೇವ ಋಷಿ ಪಿತೃತರ್ಪಣವನ್ನು ಮಾಡದವನು ದೇವ ಋಷಿ ಪಿತೃ ಋಣ ವುಳ್ಳವನಾಗಿ ನರಕದಲ್ಲಿ ಬೀಳುತ್ತಾನೆ ಎಂದು ತಿಳಿಸುತ್ತದೆ. ಇದರಿಂದ ದೇವ, ಋಷಿ, ಪಿತೃಋಣವನ್ನು ಪರಿಹರಿಸಿಕೊಳ್ಳಲು ದ್ವಿಜನು ತರ್ಪಣ ನೀಡುವುದು ಅನಿವಾರ್ಯವೆಂದು ತಿಳಿದುಬರುತ್ತದೆ.

"ಏತತ್ ಷಾಟ್ಕೌಶಿಕಂ ಶರೀರಂ ತ್ರೀಣಿ ಪಿತೃತಃ । ತ್ರೀಣಿ ಮಾತೃತಃ । ಅಸ್ಥಿಸ್ನಾಯುಮಜ್ಜಾನಃ ಪಿತೃತಃ, ತ್ವಙ್ಮಾಂಸರುಧಿರಾಣೀ ಮಾತೃತಃ"॥ ಈ ಶ್ರುತಿಯಲ್ಲಿ ಶರೀರ ನಿರ್ಮಾಣದ ವಿಚಾರವಿದೆ. ಈ ಆರು ದೇಹಸಾರ [ಕೌಶಿಕ ಶಬ್ದಕ್ಕೆ ದೇಹಸಾರವೆಂದರ್ಥ] ದಿಂದಾದ ಶರೀರವು ಅಸ್ಥಿ–ಸ್ನಾಯು–ಮಜ್ಜೆ ತಂದೆಯಿಂದ ಹಾಗೂ ಚರ್ಮ– ಮಾಂಸ– ರಕ್ತ ತಾಯಿಯಿಂದಾದದ್ದು ಎಂದಿದೆ. ನಮ್ಮ ಸಾಧನಶರೀರದ ನಿರ್ಮಾಣದಲ್ಲಿ ತಂದೆತಾಯಿಗಳ ಪ್ರತ್ಯಕ್ಷಪಾತ್ರವನ್ನು ಇದು ತಿಳಿಸುತ್ತದೆ. ಆದ್ದರಿಂದಲೇ ಶ್ರುತಿಯು " ಮಾತೃದೇವೋ ಭವ ", " ಪಿತೃದೇವೋ ಭವ " ಎಂದಿದೆ. ಮಾತೃಕುಲ ಹಾಗೂ ಪಿತೃಕುಲಗಳಿಗೆ ಸಂಬಂಧಿಸಿದ ಋಣವೇ "ಪಿತೃಋಣ". ಸಾಧನೆಗೆ ಶರೀರದ ಅವಶ್ಯಕತೆ ಯಿದ್ದಂತೆಯೇ ಜ್ಞಾನದ ಅವಶ್ಯಕತೆಯೂ ಇದೆ. ಈ ಜ್ಞಾನ ಪರಂಪರೆಯನ್ನು ನಮಗಿತ್ತವರು ಋಷಿಗಳು. ದ್ರಷ್ಟಾರರಾಗಿ, ಅಧ್ಯಯನ ಅಧ್ಯಾಪನಪರಂಪರೆಯನ್ನು ನೀಡಿ ಉಪಕರಿಸಿದ್ದರಿಂದ ಇದು " ಋಷಿಋಣ " ವಾಗುತ್ತದೆ. ಶ್ರುತಿಯು " ಆಚಾರ್ಯ ದೇವೋ ಭವ " ಎಂದು ಇದನ್ನು ತಿಳಿಸಿದೆ. ಇನ್ನು ಶ್ರುತಿಪ್ರತಿಪಾದ್ಯ ದೇವತಾತತ್ತ್ವದ ಪ್ರಾಪ್ತಿಗಾಗಿ ಮಾಡುವ ಕ್ರಿಯೆಯೇ ಯಜ್ಞಯಾಗಾದಿಗಳು. ಆ ದೇವತಾತತ್ತ್ವಗಳು [ಅಭಿಮಾನಿ ದೇವತೆಗಳು] ಎಲ್ಲ ಸಾಧಕನ ಶರೀರದಲ್ಲಿದ್ದು ಆಯಾ ಮಾರ್ಗದಲ್ಲಿ ಪ್ರೇರಿಸಿದಾಗ ಆಯಾ ಕ್ರಿಯೆಯಾಗುವುದರಿಂದ ಈ ಉಪಕಾರವು " ದೇವಋಣ "ವೆನಿಸಿದೆ – ಯಜನದಿಂದ ಇದರ ಪರಿಹಾರ.

"ದೇವಪಿತೃಕಾರ್ಯಾಭ್ಯಾಂ ನ ಪ್ರಮದಿತವ್ಯಂ" ದೇವತಾಕಾರ್ಯವನ್ನೂ ಶ್ರಾದ್ಧಾದಿ ಪಿತೃಕಾರ್ಯವನ್ನೂ ಮರೆಯಬಾರದೆಂದು ಶ್ರುತಿ ತಿಳಿಸುತ್ತದೆ. ಈ ಎಲ್ಲಾ ಹಿನ್ನೆಲೆಯಲ್ಲಿ ತರ್ಪಣ ಶಬ್ದಕ್ಕೆ "ತೃಪ್ತಿಪಡಿಸುವಿಕೆ" ಎಂಬ ಅರ್ಥವಿದ್ದು ಉಪಕೃತನಾದವನು ಉಪಕೃತಭಾವದಿಂದ ಉಪಕಾರ ಮಾಡಿದವರ ಉಪಕಾರಸ್ಮರಣೆ ಮಾಡುವ ಕ್ರಿಯೆ ತರ್ಪಣ ಎನಿಸಿದೆ.

## ೨. ತರ್ಪಣ ಕ್ರಿಯೆಯ ನಿಯಮಗಳು

### ೧. ಎಳ್ಳು ದರ್ಭೆಯ ಪ್ರಾಶಸ್ತ್ಯ

ಕಲ್ಪಾದಿಯಲ್ಲಿ ವರಾಹಾವತಾರದ ಗುರುತಾಗಿ ವರಾಹಪರ್ವತವು ವರಾಹರೂಪಿ ಪರಮಾತ್ಮನಿಂದ ಮಾಡಲ್ಪಟ್ಟು, ಈ ಪರ್ವತದಲ್ಲಿಯೇ ಭೂಮಿಯನ್ನು ಎತ್ತಿದಾಗ ತನ್ನ ಕೋರೆದಾಡೆಗೆ ತಗಲಿದ್ದ ಮಣ್ಣಿನಿಂದ ಉಂಡೆಯನ್ನು ಮಾಡಿ ತನ್ನ ಬೆವರನ್ನೇ ಎಳ್ಳು , ರೋಮವನ್ನೇ ದರ್ಭೆಯನ್ನಾಗಿಸಿ ಆ ಶ್ರೇಷ್ಠವಾದ ಪರ್ವತದಲ್ಲಿ ಹರಿಯುತ್ತಿದ್ದ ನದೀತೀರದಲ್ಲಿ ಆ ದರ್ಭೆಗಳನ್ನು ದಕ್ಷಿಣಾಗ್ರವಾಗಿ ಹರಡಿ ಎಳ್ಳು ನೀರನ್ನು ಬಿಟ್ಟನು. [ ಕಲ್ಪಾರಂಭೇ ವರಾಹಸ್ಯ ಪರಮೂರ್ತೇಃ ಸಶೈಲತಾಂ । ತಾಂ ಸಮಾಸಾದ್ಯ ಧರ್ಮಾತ್ಮ ದೇವಃ ಸರ್ವಗತಃ ಪ್ರಭುಃ ॥ ದಂಷ್ಟ್ರಾಗ್ರಲಗ್ನಂ ಮೃತ್ಪಿಂಡಂ ಗೃಹೀತ್ವಾ ದಕ್ಷಿಣೇ ಕರೇ । ಪ್ರಸ್ವೇದಾಚ್ಚ ತಿಲಾನ್‌ಕೃತ್ವಾ ದರ್ಭಾ ರೋಮಭ್ಯ ಏವ ಚ ॥ ಜಲಪ್ರಸ್ರವಣಾಭ್ಯಾಶೇ ತಸ್ಮಿನ್ಗಿರಿವರೇ ತದಾ। ದಕ್ಷಿಣಾಗ್ರಾಂಸ್ತು ವಿನ್ಯಸ್ಯ ದರ್ಭಾಂಸ್ತಾನ್ ಮಧುಸೂದನಃ ॥ ವಿಷ್ಣು ಧರ್ಮೋತ್ತರ/ ಪುರಾಣ/ಅಧ್ಯಾಯ ೧೪೯ ] ತರ್ಪಣವೆಂದರೆ ತೃಪ್ತಿಪಡಿಸುವಿಕೆ. ಉಪಕೃತನಾದವನು ಉಪಕಾರ ಮಾಡಿದವರ ಸ್ಮರಣೆ ಮಾಡುವ ವಿಧಾನ. ದೇವ, ಋಷಿ, ಪಿತೃ ತರ್ಪಣಗಳನ್ನು ಜಲಾಂಜಲಿಯಿಂದ ನೀಡಬಹುದು . ಹಾಗೆಯೇ ತರ್ಪಣದ ನೀರಿನೊಂದಿಗೆ ದೇವತರ್ಪಣಕ್ಕೆ ಅಕ್ಕಿ, ಋಷಿ ತರ್ಪಣಕ್ಕೆ ಅಕ್ಕಿ ಹಾಗೂ ಎಳ್ಳು ಮಿಶ್ರ ಮಾಡಿ, ಪಿತೃ ತರ್ಪಣಕ್ಕೆ ಬರಿಯ ಎಳ್ಳನ್ನು ಬಳಸಬೇಕು. [ ಅದ್ಭಿಸ್ತಂಡುಲ ಮಿಶ್ರಾಭಿರ್ದೇವಾನಾಂ ತರ್ಪಣಂ ಭವೇತ್ । ಸಯವಾಭಿಃ ಋಷೀಣಾಂ ಸ್ಯಾತ್ಪಿತೃಣಾಂ ಸತಿಲೋದಕೈಃ ॥ ] ಸಾಮಾನ್ಯವಾಗಿ ನಿತ್ಯದಲ್ಲೂ ಬ್ರಹ್ಮ ಯಜ್ಞಾಂಗವಾಗಿ ಜಲದಲ್ಲೇ ತರ್ಪಣ ನೀಡುವುದೇ ಹೆಚ್ಚು ಬಳಕೆಯಲ್ಲಿದೆ. ಪುಣ್ಯಕಾಲನಿಮಿತ್ತ ತರ್ಪಣ ನೀಡಬೇಕಾದರೆ ರಾತ್ರಿಯಾದರೂ ಅಲ್ಲಿಯ ಪರ್ಯಂತ ಉಪವಾಸವಿರಬೇಕು. [ ಸಂಕ್ರಮಣಗಳು , ಗ್ರಹಣ ]. ತಿಲತರ್ಪಣದಲ್ಲಿ ಅಂದರೆ ಹಗಲು

ತಿಲತರ್ಪಣ ನೀಡಿದ್ದರೆ ರಾತ್ರಿ ಭೋಜನ ನಿಷಿದ್ಧ. ತಿಲತರ್ಪಣಕ್ಕೆ ಅಶಕ್ತನಾದರೆ ಜಲತರ್ಪಣ ನೀಡಬಹುದು, ಆಗ ರಾತ್ರಿಭೋಜನ ಮಾಡಬಹುದು. [ಅನಾರೋಗ್ಯ, ಅಶಕ್ತತೆಯಿದ್ದ ಪಕ್ಷದಲ್ಲಿ. ] ಅಂದು ಬ್ರಹ್ಮಚರ್ಯೆಯಿಂದಿರಬೇಕು. ಆಯುಷ್ಕರ್ಮ [ ಕ್ಷೌರ ] ಮಾಡಿಸಿಕೊಳ್ಳಬಾರದು. ತಿಲತರ್ಪಣಕ್ಕೆ ಉಪಯೋಗಿಸುವ ಪಾತ್ರೆ ಗೋಕರ್ಣದಷ್ಟು ವಿಸ್ತಾರವಾಗಿರಬೇಕು. ಎಂದರೆ ಒಂದು ಗೇಣಿನಷ್ಟು, ಸುಮಾರು ಒಂಭತ್ತು ಅಂಗುಲ ವಿಸ್ತಾರವಾಗಿರಬೇಕು. "ತಂಡುಲವೇ ! [ಅಕ್ಕಿಯೇ] ಧಾನ್ಯರಾಜನಾದ ನೀನು ವರುಣನಿಗೆ ಸೇರಿದವನಾಗಿದ್ದು, ಮಧುವಿನಿಂದ ಕೂಡಿದ್ದೀಯ, ಪಾಪಗಳನ್ನು ತೊಳೆದು ಪವಿತ್ರಮಾಡುವ ನಿನ್ನನ್ನು ಋಷಿಗಳು ಸ್ಮರಿಸುವರು. ಗೋಸವದೇವನಿಂದ ನಿರ್ಮಿಸಲ್ಪಟ್ಟ ಎಳ್ಳೇ ! ನೀನು ಸೋಮದೇವತೆಗೆ ಸೇರಿದವ, ಎಲ್ಲಾ ದೇವತೆಗಳಿಗೆ ಹಾಗೂ ಪಿತೃಗಳಿಗೂ ನೀನು ಯಾವಾಗಲೂ ತೃಪ್ತಿಯನ್ನುಂಟು ಮಾಡುವಿ". [ ತಂಡುಲೋ ಧಾನ್ಯರಾಜಸ್ತ್ವಂ ವಾರುಣೋ ಮಧುಸಂಯುತಃ । ನಿರ್ಣೇಜಕೋಽಸಿ ಪಾಪಾನಾಂ ಪವಿತ್ರ ಋಷಿಭಿಃ ಸ್ಮೃತಃ ॥೩೨॥ ತಿಲೋಽಸಿ ಸೋಮದೈವತ್ಯೋ ಗೋಸವೋದೇವ ನಿರ್ಮಿತಃ । ತರ್ಪಕಃ ಸರ್ವದೇವಾನಾಂ ಪಿತೄಣಾಮಪಿ ಸರ್ವದಾ ॥೩೩॥ ವರಾಹ ಪುರಾಣ ಚಾತುರ್ಮಾಸ್ಯ ಮಹಾತ್ಮೆ/ಅಧ್ಯಾಯ ೭ ]

### ೨. ತರ್ಪಣದಿಂದ ಋಣಮುಕ್ತ

"ಕುರ್ಯಾದಹರಹಃ ಶ್ರಾದ್ಧಮನ್ನಾದ್ಯೇನೋದಕೇನ ವಾ"॥ ಅಧ್ಯಾಯ ೩/ ಶ್ಲೋಕ ೮೨/ಮನುಸ್ಮೃತಿ. ಮನುಸ್ಮೃತಿಯ ಈ ಮಾತಿನಂತೆ ಶ್ರಾದ್ಧವು ನಿತ್ಯವಿಧಿ. ನಿತ್ಯದಲ್ಲಿ ಶ್ರಾದ್ಧವು ಕಷ್ಟಸಾಧ್ಯವಾದ್ದರಿಂದ ಅನ್ನ ನೀರಿನಿಂದಾದರೂ ಮಾಡಬೇಕೆಂದು ವಿಕಲ್ಪವಾಗಿ ಹೇಳಿದ್ದರಿಂದ ಜಲದಿಂದಾದರೂ ತರ್ಪಣ ನೀಡಬೇಕೆಂಬುದು ಸಿದ್ಧವಾಗುತ್ತದೆ. ಹುಟ್ಟಿನೊಂದಿಗೆ ದ್ವಿಜನು ಮೂರು ಋಣಗಳಿಂದ ಕೂಡಿರುತ್ತಾನೆ. ಅಧ್ಯಯನ, ಅಧ್ಯಾಪನದಿಂದ ಋಷಿಋಣ, ಯಜ್ಞಯಜನದಿಂದ ದೇವಋಣ, ಸತ್ಸಂತಾನದಿಂದ ಪಿತೃಋಣದಿಂದ ಬಿಡುಗಡೆ ಹೊಂದುತ್ತಾನೆ. [ ಜಾಯಮಾನೋ ಹ ವೈ ಬ್ರಾಹ್ಮಣಸ್ತ್ರಿಭಿಃ ಋಣವಾನ್ ಜಾಯತೇ । ಬ್ರಹ್ಮಚರ್ಯೇಣ ಋಷಿಭ್ಯಃ ಯಜ್ಞೇನ ದೇವೇಭ್ಯಃ ಪ್ರಜಯಾ ಪಿತೃಭ್ಯಃ ಏಷವಾನ್ ಋಣಃ ॥ ತೈತ್ತಿರೀಯ ಸಂಹಿತಾ ೬– ೩ – ೧೦ ]

### ೩. ತರ್ಪಣವು ನಿತ್ಯವಿಧಿ

ದೇವಯಜ್ಞ, ಭೂತಯಜ್ಞ, ಪಿತೃಯಜ್ಞ, ಬ್ರಹ್ಮಯಜ್ಞ, ಮನುಷ್ಯಯಜ್ಞ

ಎಂಬೀ ಐದು ಪಂಚಯಜ್ಞಗಳು. ಅಗ್ನಿಯಲ್ಲಿ ಹೋಮಿಸುವುದು ದೇವಯಜ್ಞ, ಬಲಿಹರಣವು ಭೂತಯಜ್ಞ, ಪಿತೃಪ್ರೀತ್ಯರ್ಥವಾಗಿ ನೀಡುವುದು ಪಿತೃಯಜ್ಞ, ಸ್ವಾಧ್ಯಾಯವು ಬ್ರಹ್ಮಯಜ್ಞ, ಮನುಷ್ಯರಿಗೆ [ಅತಿಥಿಗೆ] ನೀಡುವುದು ಮನುಷ್ಯ ಯಜ್ಞ– ಇವಿಷ್ಟನ್ನೂ "ಪ್ರತಿನಿತ್ಯದಲ್ಲಿ" ಆಚರಿಸಬೇಕು. [ಅಥಾತಃ ಪಂಚಯಜ್ಞಾ ದೇವ ಯಜ್ಞೋ । ಭೂತ ಯಜ್ಞಃ । ಪಿತೃಯಜ್ಞೋ । ಬ್ರಹ್ಮಯಜ್ಞೋ । ಮನುಷ್ಯಯಜ್ಞ ಇತಿ । ತದ್ಯದಗ್ನೌ ಜುಹೋತಿ ಸ ದೇವಯಜ್ಞೋ । ಯದ್ಬಲಿಂ ಕರೋತಿ ಸ ಭೂತಯಜ್ಞೋ । ಯತ್ಪಿತೃಭ್ಯೋ ದದಾತಿ ಸ ಪಿತೃಯಜ್ಞೋ । ಯತ್ಸ್ವಾಧ್ಯಾಯಮಧೀತೇ ಸ ಬ್ರಹ್ಮಯಜ್ಞೋ । ಯನ್ಮನುಷ್ಯೇಭ್ಯೋ ದದಾತಿ ಸ ಮನುಷ್ಯಯಜ್ಞ ಇತಿ । ತಾನೇತಾನ್ಯಜ್ಞಾನಹರಹಃ ಕುರ್ವೀತ ॥ – ಅಶ್ವಲಾಯನ ಗೃಹ್ಯಸೂತ್ರ–ಅಧ್ಯಾಯ ೩.]

### ೪. ತರ್ಪಣ ಅನಿವಾರ್ಯ

ಈ ಶರೀರವು ಆರು ದೇಹಸಾರದಿಂದಾಗಿದೆ, ಅವು ತಂದೆಯಿಂದ ಅಸ್ಥಿ–ಸ್ನಾಯು–ಮಜ್ಜೆ ಎಂಬ ಮೂರು ಹಾಗೂ ತಾಯಿಯಿಂದ ಚರ್ಮ–ಮಾಂಸ–ರಕ್ತವೆಂಬ ಮೂರು. [ ಏತತ್ ಷಾಟ್ಕೌಶಿಕಂ ಶರೀರಂ ತ್ರೀಣಿ ಪಿತೃತಃ । ತ್ರೀಣಿ ಮಾತೃತಃ । ಅಸ್ಥಿಸ್ನಾಯುಮಜ್ಜಾನಃ ಪಿತೃತಃ, ತ್ವಙ್ಮಾಂಸರುಧಿರಾಣೀ ಮಾತೃತಃ] ಆದ್ದರಿಂದ ಪಿತೃಋಣದಿಂದ ಬಿಡುಗಡೆಯಾಗಲು ಕರ್ತೃವಿಗೆ ಶ್ರಾದ್ಧ, ತರ್ಪಣಗಳು ಅನಿವಾರ್ಯ.

### ೫. ಸ್ನಾನಾನಂತರವೇ ತರ್ಪಣ

ಅಯನ ಹಾಗೂ ಪರ್ವಕಾಲಗಳಲ್ಲಿ ಸ್ನಾನಾನಂತರ ತಿಲೋದಕದಿಂದ ತರ್ಪಿಸಿದರೆ ಯಮ ಹಾಗೂ ಯಮಗಣದಿಂದ ಭಯವನ್ನು ತರ್ಪಣ ನೀಡಿದವನು ಹೊಂದುವುದಿಲ್ಲ. [ಅಯನೇ ಪರ್ವಸು ಸ್ನಾತ್ವಾ ಯಃ ಪ್ರದದ್ಯಾತ್ತಿಲೋದಕಂ। ಯಮಾಯ ಸಗಣಾಯೈವ ತದ್ಭಯಂ ನ ಸ ವಿಂದತೇ ॥ ೩೯೭॥ – ಶೌನಕೀಯ ಋಗ್ವಿಧಾನ] ದ್ವಿಜನಿಗೆ ದೇವ, ಋಷಿ, ಪಿತೃ ತರ್ಪಣಗಳಲ್ಲಿ ಅಧಿಕಾರ. ಎಂದರೆ ಅನುಪನೀತನಿಗೆ ತರ್ಪಣದಲ್ಲಿ ಅಧಿಕಾರವಿಲ್ಲ. ಮನುಸ್ಮೃತಿಯಲ್ಲಿ ಬ್ರಹ್ಮಚಾರಿಗೆ ನಿತ್ಯದಲ್ಲೂ ಸ್ನಾನಾನಂತರ ದೇವ, ಋಷಿ, ಪಿತೃ ತರ್ಪಣ, ಸಾಯಂ ಪ್ರಾತಃ ಅಗ್ನಿಕಾರ್ಯ, ದೇವತಾರ್ಚನೆ ಹೇಳಲ್ಪಟ್ಟಿದೆ. ಈ ವಿಷಯ ಗೌತಮ ಧರ್ಮಸೂತ್ರದಲ್ಲಿಯೂ ಹೇಳಿದೆ. [ ನಿತ್ಯಂ ಸ್ನಾತ್ವಾ ಶುಚಿಃ ಕುರ್ಯಾದ್ದೇವರ್ಷಿ ಪಿತೃತರ್ಪಣಮ್ । ದೇವತಾಭ್ಯರ್ಚನಂ ಚೈವ ಸಮಿದಾಧಾನಮೇವ ಚ ॥

ಪ್ರತ್ಯಹಂ ಸ್ನಾತ್ವಾ ದೇವರ್ಷಿಪಿತೃಭ್ಯಶ್ಚ ಉದಕದಾನಂ, ಪ್ರತಿಮಾದಿಷು ಹರಿಹರಾದಿ ದೇವಪೂಜನಂ, ಸಾಯಂ ಪ್ರಾತಶ್ಚ ಸಮಿದ್ಧೋಮಂ ಕುರ್ಯಾತ್ ॥ ಮನುಸ್ಮೃತಿ/ ಅಧ್ಯಾಯ೨/ಶ್ಲೋಕ೧೭೬ ಕುಲ್ಲೂಕಭಟ್ಟೀಯ ಮನ್ವರ್ಥ ಮುಕ್ತಾವಲೀ ವ್ಯಾಖ್ಯಾ. ಪಿತೃಭ್ಯಶ್ಚೋದಕದಾನಂ ಯಥೋತ್ಸಾಹ ಮನ್ಯತ್ ॥ ೫ ॥ – ಗೌತಮ ಧರ್ಮಸೂತ್ರ ಪ್ರಥಮ ಪ್ರಶ್ನ/ಪಂಚಮೋಧ್ಯಾಯ ಸೂತ್ರ ಸಂಖ್ಯೆ–೫ , ಪಿತೃಭ್ಯೋ ನಿತ್ಯಮುದಕಂ ದದ್ಯಾತ್ । ಅನ್ಯದ್ಭೋಜನ ಫಲ ಮೂಲಾದಿ ಯಥೋತ್ಸಾಹಂ ಯಥಾಶಕ್ತಿ ದದ್ಯಾತ್ । ಅತ್ರ ಚಕಾರಾನ್ನಿತ್ಯಂ ದೇವರ್ಷೀಣಾಮಪಿ ತರ್ಪಣಂ ಕರ್ತವ್ಯಮಿತಿ ದರ್ಶಿತಂ । ತತ್ರ ಮನು ಬ್ರಹ್ಮಚಾರಿಣಂ ಪ್ರಕೃತ್ಯಾಽಽಹ – ನಿತ್ಯಂ ಸ್ನಾತ್ವಾ ಶುಚಿಃ ಕುರ್ಯಾದ್ದೇವರ್ಷಿ ಪಿತೃತರ್ಪಣಮ್ ॥ ಹರದತ್ತನ ಮಿತಾಕ್ಷರವೃತ್ತಿ ] .

## ೬. ಜೀವತ್ಪಿತೃಕನ ನಿಯಮ

ತಂದೆ ಬದುಕಿರುವವನಿಗೆ [ಜೀವತ್ಪಿತೃಕನಿಗೆ] ತಿಲದಿಂದ ಪಿತೃತರ್ಪಣದಲ್ಲಿ ಅಧಿಕಾರವಿಲ್ಲ. [ ವ್ಯಾಸಃ – ನ ಜೀವತ್ಪಿತೃಕಃ ಕುರ್ಯಾತ್ತಿಲೈಃ ಕೃಷ್ಣೈಶ್ಚ ತರ್ಪಣಂ । ] ಸ್ನಾನಾಂಗ ಭೂಪಿತ್ಯಾನ್ ತರ್ಪಯಾಮಿ ಎಂಬ ಪಿತೃತರ್ಪಣದಲ್ಲಿ ಅಧಿಕಾರವಿದೆ. ಸ್ನಾನಾಂಗ ಶಿಖೋದಕ, ವಸ್ತ್ರನಿಷ್ಪೀಡನ, ಯಕ್ಷ್ಮತರ್ಪಣಾದಿಗಳಲ್ಲಿ ಅಧಿಕಾರವಿಲ್ಲ. ಬ್ರಹ್ಮಯಜ್ಞಾಂಗ ದೇವ ಋಷಿ ಆಚಾರ್ಯ ತರ್ಪಣದಲ್ಲಿ, ದೇವ ತರ್ಪಣದಲ್ಲಿ ಉಪವೀತಿಯಾಗಿಯೂ; ಋಷಿ ತರ್ಪಣದಲ್ಲಿ ಮಾಲಾಕಾರ ವಾಗಿಯೂ, ಆಚಾರ್ಯ ಪಿತೃತರ್ಪಣದಲ್ಲಿ ಪ್ರಕೋಷ್ಠ [ ಜೀವತ್ಪಿತೃಕಂ ಪ್ರತ್ಯಾಹ ವೃದ್ಧಗಾರ್ಗ್ಯಃ – ನ ಕುರ್ವೀತಾಪಸವ್ಯಂ ಚ ನ ಕುರ್ವೀತಾಪಿ ಮುಂಡನಮ್ । ಅಪಸವ್ಯನಿಷೇಧಃ ಪ್ರಕೋಷ್ಠಾದುಪರಿ – ಅಪಸವ್ಯಂ ದ್ವಿಜಾಗ್ರ್ಯಾಣಾಂ ಪಿತ್ರ್ಯೇ ಸರ್ವತ್ರ ಕೀರ್ತಿತಮ್ । ಆಪ್ರಕೋಷ್ಠಾತ್ಪ್ರಕರ್ತವ್ಯಂ ಮಾತಾಪಿತ್ರೋಸ್ತು ಜೀವತೋಃ॥ ಇತಿ ವಚನಾದಿತ್ಯುಕ್ತಂ ಜೀವತ್ಪಿತೃಕನಿರ್ಣಯೇ ಭಟ್ಟೈಃ । ಪ್ರಕೋಷ್ಠಸ್ತಸ್ಯ ಚಾಪ್ಯಧ ಇತ್ಯಮರಃ । ತಸ್ಯ ಕೂರ್ಪರಸ್ಯಾಧೋ ಮಣಿಬಂಧ ಪರ್ಯಂತಂ ಪ್ರಕೋಷ್ಠ ಇತ್ಯರ್ಥಃ – ಆಚಾರೇಂದುಃ ] ಪರ್ಯಂತ ಎಂದರೆ ಎಡಗೈ ಮಣಿಕಟ್ಟನ್ನು ದಾಟದಂತೆ ಅಂದರೆ ಎಡಗೈ ಹೆಬ್ಬೆಟ್ಟಿಗೆ ಸುತ್ತಿರುವಂತೆ ಜನಿವಾರವನ್ನು ಧರಿಸಬೇಕು ಮತ್ತು ಜಲಾಂಜಲಿಯನ್ನು ಮಾತ್ರ ನೀಡಬೇಕು. ಪವಿತ್ರವು ಅನಾಮಿಕೆಯ ಎರಡನೆ ಪರ್ವವನ್ನು ದಾಟಬಾರದು

ಅಂದರೆ ಬೆರಳಿನ ಬುಡದವರೆಗೂ ಬರಬಾರದು. ಕರ್ಮದ ಕೊನೆಯಲ್ಲಿ ಪವಿತ್ರದ ಗಂಟನ್ನು ಬಿಚ್ಚಿ ಪವಿತ್ರ ವಿಸರ್ಜನೆಯನ್ನು ಮಾಡಬೇಕು. [ ಪ್ರಥಮಂ ಲಂಘಯೇತ್ಪರ್ವಂ ದ್ವಿತೀಯಂ ನೈವ ಲಂಘಯೇತ್ । ತಯೋಸ್ತು ಪರ್ವಯೋ ರ್ಮಧ್ಯೇ ಪವಿತ್ರಂ ಧಾರಯೇತ್ ದ್ವಿಜಃ ॥ ಕೂರ್ಚೇಣ ವಾ ಪವಿತ್ರೇಣ ಯೇನ ಕರ್ಮಾಣಿ ಕಾರಯೇತ್ । ತಸ್ಯ ಗ್ರಂಥಿಂ ವಿಸೃಜ್ಯೈವ ಕರ್ಮಾಂತೇ ತತ್ತ್ಯಜೇತ್ ದ್ವಿಜಃ ॥ ವರಾಹಪುರಾಣ ಚಾ. ಮಾಸ. ಮಹಾತ್ಮೆ/ಯೋಗ ಯಾಜ್ಞವಲ್ಕ್ಯರ ಮಾತಿನಂತೆ-ಕವ್ಯವಾಹೋಽನಲಃ ಸೋಮೋ ಯಮಶ್ಚೈವಾರ್ಯಮಾ ತಥಾ। ಅಗ್ನಿಷ್ವಾತ್ತಾ ಬರ್ಹಿಷದಃ ಸೋಮಪಾ ಆಜ್ಯಪಾಸ್ತಥಾ ॥ ಸಪದಿಸ್ಯಾತ್ ಜ್ಜೀವತ್ಪಿತೃಕಃ ಏಭ್ಯೋ ದದ್ಯಾಜ್ಜಲಾಂಜಲಿಮ್ ॥ ಎಂದು ಜೀವತ್ಪಿತೃಕನಿಗೆ ಬ್ರಹ್ಮಯಜ್ಞಾಂಗ ಪಿತೃತರ್ಪಣ ಹೇಳಲಾಗಿದೆ. ಶ್ರೀಕೃಷ್ಣಾಚಾರ್ಯ ಸ್ಮೃತಿ ಮುಕ್ತಾವಲಿ ಮತ್ತು ಥಲಾರಿ ಸ್ಮೃತ್ಯರ್ಥ ಸಾಗರದಲ್ಲಿ ಆಹ್ನಿಕ ತರಂಗ. ಸಂಸ್ಕಾರಪದ್ಧತಿಯಲ್ಲಿ ಜೀವತ್ಪಿತೃಕನಿಗೆ ನಮೋ ವಿವಸ್ವತೇ ಬ್ರಹ್ಮಭಾಸ್ವತೇ ವಿಷ್ಣು ತೇಜಸೇ । ಜಗತ್ಸವಿತ್ರೇ ಶುಚಯೇ ಕರ್ಮ ಸವಿತ್ರೇ ಕರ್ಮಸಾಕ್ಷಿಣೇ ॥ [ವಿಷ್ಣು ಪುರಾಣ ತೃತೀಯಾಂಶ ಅಧ್ಯಾಯ ೧೧/ ಶ್ಲೋಕ ೩೯ ] ಎಂಬ ಮಂತ್ರದಿಂದ ಜಲಾಂಜಲಿಯನ್ನು ನೀಡಬೇಕು ಎಂದಿದೆ **ಆದರೆ ಸಂಪ್ರದಾಯದಲ್ಲಿ ಆಚಾರ್ಯ ತರ್ಪಣ ಮಾತ್ರವಿದೆ.** ]

## ೭. *ಸಂಕಲ್ಪ ವಿಚಾರ*

ಸಂಕಲ್ಪಸಹಿತವಾಗಿಯೇ ಸರ್ವ ಕರ್ಮಗಳನ್ನು ಮಾಡಬೇಕು. ಸಂಕಲ್ಪರಹಿತವಾಗಿದ್ದರೆ ಪುಣ್ಯಕರ್ಮಗಳೆಲ್ಲಾ ನಿಷ್ಫಲವಾಗುತ್ತದೆ. [ ಸಂಕಲ್ಪ್ಯ ಚ ಯಥಾ ಕುರ್ಯಾತ್ಸ್ನಾನ ದಾನವ್ರತಾದಿಕಮ್ । ಅನ್ಯಥಾ ಪುಣ್ಯಕರ್ಮಾಣಿ ನಿಷ್ಫಲಾನಿ ಭವಂತಿ ಹಿ ॥ – ಇತಿ ವಿಷ್ಣುಸ್ಮೃತಿ ॥ ಸಂಕಲ್ಪಂ ಸೂಕ್ತಪಠನಂ ಮಾರ್ಜನಂ ಚಾಘಮರ್ಷಣಮ್ । ದೇವಾದಿತರ್ಪಣಂ ಪ್ರೋಕ್ತಂ ಸ್ನಾನಂ ಪಂಚಾಂಗಮುತ್ತಮಮ್ ॥ ] ಸ್ನಾನಾನಂತರವೇ ತರ್ಪಣ. ಸ್ನಾನಾಂಗ ತರ್ಪಣದಲ್ಲಿ ಜಲಾಶಯದ ಅಥವಾ ನದಿನೀರಿನಿಂದಲೇ ದ್ವಾದಶನಾಮಗಳನ್ನು ಧರಿಸಿ ಆಚಮನ, ಸಂಕಲ್ಪಪೂರ್ವಕ ಜಲಾಂಜಲಿಯನ್ನು ನೀಡಬೇಕು. ಶ್ರಾದ್ಧ, ಸಂಧ್ಯಾವಂದನೆ, ಜಪ, ಹೋಮ, ಬ್ರಹ್ಮಯಜ್ಞ, ಪಿತೃತರ್ಪಣ ಈ ಎಲ್ಲವೂ ಊರ್ಧ್ವಪುಂಡ್ರ ಧರಿಸದೆ ಮಾಡಿದರೆ ನಿಷ್ಫಲವಾಗುತ್ತದೆ. [ ಶ್ರಾದ್ಧಂ ಸಂಧ್ಯಾ ಜಪೋ ಹೋಮಃ

ಸ್ವಾಧ್ಯಾಯಃ ಪಿತೃತರ್ಪಣಮ್ । ವ್ಯರ್ಥಂ ಭವತಿ ತತ್ಸರ್ವಂ ಊರ್ಧ್ವಪುಂಡ್ರಂ ವಿನಾ ಕೃತಮ್ ॥೫೫॥ – ವರಾಹ ಪುರಾಣ ಚಾತುರ್ಮಾಸ್ಯ ಮಹಾತ್ಮೆ/ ಅಧ್ಯಾಯ ೫].

## ೮ . ಆಸನ ವಿಚಾರ.

ಕರ್ತೃವು  ಬರೀ ನೆಲದ ಮೇಲೆ ಕೂಡಬಾರದು. ಮಣೆ, ಕೃಷ್ಣಾಜಿನಾದಿ ಆಸನಗಳನ್ನುಪಯೋಗಿಸಬೇಕು. ಯೋಗ್ಯ ಮಡಿವಸ್ತ್ರಗಳನ್ನು ಧರಿಸಿರಬೇಕು. ಶಿಖಾ ಬಂಧಿಸಿರಬೇಕು. [ಗಂಟು ಹಾಕಿಕೊಂಡಿರಬೇಕು]. ಆಸನದ [ಕುಳಿತುಕೊಳ್ಳುವ] ವಿಷಯದಲ್ಲಿ ವ್ಯಾಸರು ಈ ರೀತಿ ಹೇಳುತ್ತಾರೆ – ದರ್ಭೆ, ಕಂಬಳಿ, ಚರ್ಮ, ವಸ್ತ್ರ, ಮರ, ತಾಳೆಗರಿಯಿಂದಾದ ಆಸನವನ್ನುಪಯೋಗಿಸಬೇಕು. ಕೃಷ್ಣಾಜಿನದಿಂದ ಜ್ಞಾನಸಿದ್ಧಿ, ವ್ಯಾಘ್ರ [ ಹುಲಿಯ ] ಚರ್ಮದಿಂದ ಮೋಕ್ಷಸಂಪತ್ತು, ಕುಶಾಸನದಿಂದ ವ್ಯಾಧಿನಾಶ, ರಮ್ಯವಾಗಿರತಕ್ಕಂತಹ ಕಂಬಳಿಯಿಂದ ಸರ್ವೇಷ್ಟವುಂಟಾಗುತ್ತದೆ. ಬಿದಿರಿನಿಂದಾದ ಆಸನದಿಂದ ದಾರಿದ್ರ್ಯ, ಕಲ್ಲಾದರೆ ವ್ಯಾಧಿ, ಬರೀನೆಲದಲ್ಲಿ ಕುಳಿತುಕೊಳ್ಳುವುದರಿಂದ ದುಃಖ, ಮುರಿದುಹೋದ ಮಣೆಯಿಂದ ದೌರ್ಭಾಗ್ಯ, ಹುಲ್ಲಿನಿಂದಾದದ್ದಾದರೆ ಧನ ಹಾಗೂ ಯಶಸ್ಸಿನ ಹಾನಿ, ಚಿಗುರಿನಿಂದಾದದ್ದಾದರೆ ಚಿತ್ತಭ್ರಮಣೆಯಾಗುತ್ತದೆ. [ ಆಸನಾನ್ಯಾಹ ವ್ಯಾಸಃ – ಕೌಶೇಯಂ ಕಂಬಲಂ ಚೈವ ಅಜಿನಂ ಪಟ್ಟಮೇವ ಚ । ದಾರುಜಂ ತಾಡಪತ್ರಂ ವಾ ಆಸನಂ ಪರಿಕಲ್ಪಯೇತ್ ॥ ಕೃಷ್ಣಾಜಿನೇ ಜ್ಞಾನಸಿದ್ಧಿರ್ಮೋಕ್ಷಶ್ರೀರ್ವ್ಯಾಘ್ರಚರ್ಮಣಿ । ಕುಶಾಸನೇ ವ್ಯಾಧಿನಾಶಃ ಸರ್ವೇಷ್ಟಶ್ಚಿತ್ರಕಂಬಲಃ ॥ ವಂಶಾಸನೇ ತು ದಾರಿದ್ರ್ಯಂ ಪಾಷಾಣೇ ವ್ಯಾಧಿರೇವ ಚ । ಧರಣ್ಯಾಂ ತು ಭವೇದ್ದುಃಖಂ ದೌರ್ಭಾಗ್ಯಂ ಛಿದ್ರದಾರುಜೇ ॥ ತೃಣೇ ಧನಯಶೋಹಾನಿಃ ಪಲ್ಲವೇ ಚಿತ್ತವಿಭ್ರಮಃ॥ ಇತಿ ] ಯಾವಾಗಲೂ ದೇವಕಾರ್ಯಗಳಲ್ಲಿ ಬಲಗಾಲನ್ನು ಮಡಚಿ, ಪಿತೃಕಾರ್ಯಗಳಲ್ಲಿ ಎಡಗಾಲನ್ನು ಮಡಚಿ ಸೇವೆಮಾಡಬೇಕು ಎಂದು ಕಾತ್ಯಾಯನರು ಹೇಳುತ್ತಾರೆ. "ಸದಾ"ಯೆಂಬ ಶಬ್ದದಿಂದ ತರ್ಪಣಕಾಲದಲ್ಲಷ್ಟೇ ಅಲ್ಲದೇ ಯಾವಾಗಲೂ ಎಂಬುದು ತಿಳಿಯುತ್ತದೆ. [ ಕಾತ್ಯಾಯನಃ – ದಕ್ಷಿಣಂ ಪಾತಯೇಜ್ಜಾನು ದೇವಾನ್ ಪರಿಚರನ್ಸದಾ । ಪಾತಯೇದಿತರಜ್ಜಾನು ಪಿತ್ರ್ಯಾನ್ ಪರಿಚರನ್ನಪಿ ॥ ನೈತತ್ತರ್ಪಣ ವಿಷಯಂ ಸದೇತಿವಚನಾತ್ ॥ ]

## ೯ . ಆಚಮನ ವಿಚಾರ

ಶುಚಿಯಾದ ಸ್ಥಳದಲ್ಲಿ ಕುಳಿತು, ಮೊಣಕಾಲಿನಿಂದಾಚೆ ಎರಡೂ ಕೈಯನ್ನು

ಬಾಚದೆ, ಪವಿತ್ರಸಹಿತ, ಶಿಖೆಯನ್ನು ಕಟ್ಟಿರುವಂತೆ, ಉಪವೀತಿಯಾಗಿ ಪೂರ್ವ ಅಥವಾ ಉತ್ತರ ಮುಖವಾಗಿ ಗುಳ್ಳೆ ಹಾಗೂ ನೊರೆರಹಿತವಾದ ಶೋಧಿಸಲ್ಪಟ್ಟ ಶುದ್ಧವಾದ ತಣ್ಣಗಿನ ನೀರಿನಿಂದ ಬ್ರಹ್ಮತೀರ್ಥದಿಂದ ಆಚಮಿಸಬೇಕು. [ ಶುಚೌ ದೇಶೇ ಉಪವಿಶ್ಯೈವ ಉಭಯಜಾನ್ವಂತರಹಸ್ತಯುಗ್ಮಃ ಸಪವಿತ್ರಃ ಬದ್ಧಶಿಖಃ ಬ್ರಹ್ಮಸೂತ್ರವಾನ್ ಪ್ರಾಙ್‌ಮುಖ ಉದನ್ಮುಖೋ ವಾ ಬುದ್ಬುದ ಫೇನ ರಹಿತೇನ ಶೋಧಿತೇನ ಶುದ್ಧೇನ ಶೀತಲಜಲೇನ ದ್ವಿಜಃ ಬ್ರಾಹ್ಮೇಣ ತೀರ್ಥೇನ ಆಚಮೇತ್॥ ] ದೇವ, ಪಿತೃ ಎಲ್ಲಾ ಕಾರ್ಯಗಳಲ್ಲಿಯೂ ಪೂರ್ವಾಭಿ ಮುಖವಾಗಿ ಆಚಮನ ಮಾಡಬೇಕು. ಪೂರ್ವಾಭಿಮುಖವಾಗಿ ಆಚಮಿಸಲು ಸಾಧ್ಯವಿಲ್ಲದಿದ್ದರೆ ಉತ್ತರದಿಕ್ಕಿಗೆ ತಿರುಗಿ ಆಚಮಿಸಬೇಕು. ಇದರ ಹೊರತು ಪಶ್ಚಿಮದಿಕ್ಕಿಗಭಿಮುಖವಾಗಿ ಆಚಮಿಸಿದರೆ ಪುನಃ ಪೂರ್ವದಿಕ್ಕಿಗೆ ತಿರುಗಿ ಆಚಮಿಸುವುದರಿಂದ ಶುದ್ಧಿ. ಅಕಸ್ಮಾತ್ ದಕ್ಷಿಣದಿಕ್ಕಿಗಭಿಮುಖವಾಗಿ ಆಚಮಿಸಿದರೆ ಪುನಃ ಸ್ನಾನದಿಂದಲೇ ಶುದ್ಧಿ. ಪ್ರತ್ಯಙ್‌ಮುಖಶ್ಚೇದಾಚಾಮೇತ್ ಪುನರಾಚಮ್ಯ ಶುದ್ಧ್ಯತಿ । ಯಾಮ್ಯಾ ಮುಖಶ್ಚೇದಾಚಾಮೇತ್ಪುನಃ ಸ್ನಾನೇನ ಶುದ್ಧ್ಯತಿ ॥ ಶ್ರೌತಸ್ಮಾರ್ತೇಷು ಗಾರ್ಹೇಷು ಕ್ರಿಯಮಾಣೇಷು ವೈ ಬುಧಃ । ದ್ವಿರಾಚಮೇಚ್ಚ ಸರ್ವತ್ರ ವಿಣ್ಮೂತ್ರೋತ್ಸರ್ಜನ ತ್ರಯಮ್ ॥ ಇತಿ ಹಾರೀತ ಸ್ಮೃತಿಃ ॥ ] ಶ್ರುತಿಸ್ಮೃತ್ಯುಕ್ತ, ಗೃಹ್ಯಕರ್ಮಗಳಲ್ಲೆಲ್ಲಾ ಆರಂಭ ಹಾಗೂ ಅಂತ್ಯದಲ್ಲಿ ದ್ವಿರಾಚಮನ [ಎರಡು ಬಾರಿ] ಮಾಡಬೇಕು. ಕನಿಷ್ಠಿಕಾ [ ಕಿರುಬೆರಳು ] , ಅನಾಮಿಕಾ [ ಉಂಗುರದ ಬೆರಳು ] , ಮಧ್ಯ, ತರ್ಜನೀ [ ತೋರುಬೆರಳು ] , ಹಾಗೂ ಅಂಗುಷ್ಠದ ತುದಿಯಿಂದ ದೇವತೆಗಳನ್ನು [ ದೇವತೀರ್ಥದಿಂದ ] , ಕಿರುಬೆರಳಿನ ಬುಡದಿಂದ ಋಷಿಗಳನ್ನು [ ಋಷಿ ತೀರ್ಥದಿಂದ ], ತೋರುಬೆರಳು ಹಾಗೂ ಹೆಬ್ಬೆರಳಿನ ಮಧ್ಯಭಾಗದಿಂದ [ ಪಿತೃ ತೀರ್ಥದಿಂದ], ಪಿತೃಗಳನ್ನು ತರ್ಪಿಸಬೇಕು. [ಮಾರ್ಕಂಡೇಯಃ-ಅಂಗುಷ್ಠ ಮೂಲಂ ಬ್ರಾಹ್ಮಂ ಸ್ಯಾತ್ಪ್ರಾಜಾಪತ್ಯಂ ಕನಿಷ್ಠಗಮ್ । ಪೈತೃಕಂ ತರ್ಜನೀ ಮೂಲಂ ಕರಾಗ್ರಂ ದೈವತಂ ಸ್ಮೃತಮ್ ॥ ಆಗ್ನೇಯಂ ಕರಮಧ್ಯಂ ಸ್ಯಾತ್ತೀರ್ಥಾನ್ಯೇವಂ ದ್ವಿಜಸ್ಯ ಹಿ। ತರ್ಪಣಂ ದೇವತಾದಿಭ್ಯೋ ದೇವತೀರ್ಥಾದಿಭಿಃ ಸ್ಮೃತಂ ॥ ] ತಮ್ಮತಮ್ಮ ಸೂತ್ರೋಕ್ತ ಪಿತೃದೇವತೆಗಳು [ ವಸು, ರುದ್ರ, ಆದಿತ್ಯರೂಪ ] ತರ್ಪಣದಲ್ಲಿ ಗ್ರಾಹ್ಯರು, ಇವರಲ್ಲದೇ ದೇವತೆಗಳಲ್ಲದ ತನ್ನ ತಂದೆಯೋ ಮೊದಲಾದ ಇತರ ಪಿತೃವರ್ಗದವರೂ ಗ್ರಾಹ್ಯರು. [ಅಂಗುಲ್ಯಗ್ರೈಸ್ತಥಾ ದೇವಾನ್‌ಕನಿಷ್ಠಾ ದ್ವಿಜಃ

ಮೂಲತೋ ಋಷೀನ್।ಪಿತ್ರ್ಯಾನ್ ದಿವ್ಯಾನದಿವ್ಯಾಂಶ್ಚ ತರ್ಜನ್ಯಂಗುಷ್ಠ ಮಧ್ಯತಃ॥ ತತ್ರದಿವ್ಯಾಃ ಸ್ವಸೂತ್ರೋಕ್ತಾ ಆದಿವ್ಯಾ ಜನಕಾದಯಃ ॥ ಇತಿ ಸ್ಕಾಂಧೇ ] .

### ೧೦ . ಪವಿತ್ರದ ಲಕ್ಷಣ ಹಾಗೂ ವಿಶೇಷ ವಿಚಾರಗಳು

ಬ್ರಾಹ್ಮಣನು ಶ್ರೌತ ಸ್ಮಾರ್ತ [ಶ್ರುತಿಸ್ಮೃತ್ಯುಕ್ತ] ಕರ್ಮಗಳನ್ನೆಲ್ಲಾ ಹಸ್ತದಲ್ಲಿ ಪವಿತ್ರವುಳ್ಳವನಾಗಿಯೇ ಮಾಡಬೇಕು. [ಶ್ರೌತಸ್ಮಾರ್ತಾನಿ ಕರ್ಮಾಣಿ ಯಾವಂತೀಹೋದಿತಾನಿ ವೈ । ತಾನಿ ಸರ್ವಾಣಿ ಕುರ್ವೀತ ಸಪವಿತ್ರಕರೋ ದ್ವಿಜಃ ॥] ಕುಶಾಗ್ರ ನಾಲ್ಕು ಅಂಗುಲ, ಪವಿತ್ರದಗಂಟು ಒಂದುಅಂಗುಲ, ಎರಡಂಗುಲ ಬೆರಳಿಗೆ ತೊಡುವ ಪವಿತ್ರದ ಭಾಗವುಳ್ಳದ್ದಾಗಿ ದರ್ಭೆಯಿಂದ ಮಾಡಲ್ಪಟ್ಟದ್ದು ಪವಿತ್ರದ ಲಕ್ಷಣವು. ಯಜ್ಞೋಪವೀತ, ಮೌಂಜೀಬಂಧನ ಹಾಗೂ ದರ್ಭೆಯ ಪವಿತ್ರವಲ್ಲಿ ಬ್ರಹ್ಮಗಂಟು ಇರಬೇಕು. ಅನ್ಯಧಾರಣೀಯ ವಸ್ತುಗಳಲ್ಲಿನ ಗಂಟು ಅವರ ಅಭಿರುಚಿಗೆ ತಕ್ಕಂತೆ ಇರಬಹುದು. [ಚತುರಂಗುಲಮಗ್ರಂ ಚ ಗ್ರಂಥಿರೇಕಾಂಗುಲಿ ಭವೇತ್ । ದ್ವ್ಯಂಗುಲಂ ರಜ್ಜುವಲಯಂ ಪವಿತ್ರಸ್ಯ ತು ಲಕ್ಷಣಮ್॥ ಯಜ್ಞೋಪವೀತಮೌಂಜ್ಯಾಸ್ತು ತಥಾ ಕುಶಪವಿತ್ರಕೇ । ಬ್ರಹ್ಮ ಗ್ರಂಥಿರ್ವಿಜಾನೀಯಾದನ್ಯತ್ರ ಚ ಯಥಾರುಚಿ ॥ ಛಲಾರೀಯ ] ಪವಿತ್ರವನ್ನು ಧರಿಸಿದಾಗ ಅನಾಮಿಕ ಬೆರಳಿನ [ಉಂಗುರದ ಬೆರಳು ] ಪ್ರಥಮ ಗೆರೆಯನ್ನು ಪವಿತ್ರ ದಾಟಿರಬೇಕು. ದ್ವಿತೀಯ ಗೆರೆಯನ್ನು ದಾಟಬಾರದು, ಎಂದರೆ ಪವಿತ್ರವು ಪ್ರಥಮ ಮತ್ತು ದ್ವಿತೀಯ ಪರ್ವಗಳ [ಗೆರೆಗಳ ] ಮಧ್ಯೆ ಧರಿಸಿರಬೇಕು. ಕೂರ್ಚ ಹಾಗೂ ಪವಿತ್ರದಿಂದ ಕೂಡಿ ಮಾಡಿಧ ಕರ್ಮಗಳ ಕೊನೆಯಲ್ಲಿ ದ್ವಿಜನು ಕೂರ್ಚದ ಗಂಟು ಹಾಗೂ ಪವಿತ್ರದ ಗಂಟನ್ನು ಬಿಚ್ಚಿ ವಿಸರ್ಜಿಸಬೇಕು. ಬೆರಳ ತುದಿಯಲ್ಲಿಯ ದರ್ಭೆ ತಪೋವೃದ್ಧಿಯನ್ನು [ ದೇವ ತೀರ್ಥದ್ದು ], ಮಧ್ಯಭಾಗದ ದರ್ಭೆ [ಋಷಿ ತೀರ್ಥದ್ದು ] ಪ್ರಜಾಕಾಮನೆಯನ್ನು, ಬೆರಳಿನ ಮೂಲದಲ್ಲಿರುವ ದರ್ಭೆ [ಪಿತೃ ತೀರ್ಥದ್ದು] ಸರ್ವಪ್ರಯೋಜನವನ್ನು ಸಾಧಿಸುವುದು. ಈ ರೀತಿ ಸ್ಥಾನ ಭೇದದಿಂದ ಧರಿಸಿದ ದರ್ಭೆ ಫಲಭೇದವುಳ್ಳದ್ದಾಗಿದೆ. ದರ್ಭೆಯಿಲ್ಲದೆ ಮಾಡಿದ ಜಪಾಕರ್ಮವು ಆಸುರಿಯೆನಿಸಿಕೊಳ್ಳುತ್ತದೆ.

ಪವಿತ್ರವುಳ್ಳ ದ್ವಿಜನನ್ನು ನೋಡಿ ಆಸುರೀಶಕ್ತಿಗಳು ದಿಕ್ಕಾಪಾಲಾಗಿ ಓಡುತ್ತವೆ, ಆದ್ದರಿಂದ ಜಪ, ಬ್ರಹ್ಮಯಜ್ಞಗಳಲ್ಲಿ ದ್ವಿಜನು ಪವಿತ್ರಧಾರಿಯಾಗಿರಬೇಕು. [ ಪ್ರಥಮಂ ಲಂಘಯೇತ್ಪರ್ವಂ ದ್ವಿತೀಯಂ ನೈವ ಲಂಘಯೇತ್ । ತಯೋಸ್ತು ಪರ್ವಣೋರ್ಮಧ್ಯೇ ಪವಿತ್ರಂ ಧಾರಯೇದ್॥

ಕೂರ್ಚೇಣ ವಾ ಪವಿತ್ರೇಣ ಯೇನ ಕರ್ಮಾಣಿ ಕಾರಯೇತ್ । ತಸ್ಯ ಗ್ರಂಥಿಂ ವಿಸೃಜ್ಯೈವ ಕರ್ಮಾಂತೇ ತತ್ತ್ಯಜೇತ್ ದ್ವಿಜಃ ॥ ಅಗ್ರೇsಂಗುಲ್ಯಾಃ ಸ್ಥಿತೋ ದರ್ಭಸ್ತಪೋವೃದ್ಧಿಕರೋ ಮತಃ । ಮಧ್ಯೇ ಪ್ರಜಾಕಾಮಕರೋ ಮೂಲೇ ಸರ್ವಾರ್ಥಸಾಧಕಃ ॥ ಏವಂ ಹಿ ಫಲಭೇದಾಸ್ತು ಸ್ಥಾನಭೇದೇನ ಧಾರಣಾತ್ । ಜಪಕರ್ಮಹರಾ ಯೇ ವೈ ಅದರ್ಭಾ ಅಸುರಾಸ್ತು ತೇ ॥ ಸಪವಿತ್ರಂ ದ್ವಿಜಂ ದೃಷ್ಟ್ವಾ ವಿದ್ರವಂತಿ ದಿಶೋ ದಶ । ಬ್ರಹ್ಮಯಜ್ಞೇ ಜಪೇ ತಸ್ಮಾತ್ಪವಿತ್ರಂ ಧಾರಯೇದ್ ದ್ವಿಜಃ ॥ ] ನಡೆದಾಡುವಲ್ಲಿನ, ಚಿತಾವೇದಿಯ, ಯಜ್ಞಭೂಮಿಯ, ತರ್ಪಣ, ಆಸನ, ಪಿಂಡದಾನಕ್ಕುಪಯೋಗಿಸಿದ ದರ್ಭೆ ವರ್ಜ್ಯ. ತರ್ಪಣ ಬ್ರಹ್ಮಯಜ್ಞಕ್ಕೆ ಧರಿಸಿದ ದರ್ಭೆಯನ್ನು ಪುನಃ ಮೂರು ಘಂಟೆಯೊಳಗಿನ ಅವಧಿಯಲ್ಲಿ [ಒಮ್ಮೆ ಧರಿಸಿದ ಪವಿತ್ರವನ್ನು ಒಂದು ಯಾಮದ ಒಳಗೆ ] ಪುನಃ ಸ್ನಾನಾನಂತರ ಧರಿಸಿ ಕಾರ್ಯ ನಡೆಸಬಹುದು, ಹೊಸ ಪವಿತ್ರದ ಅಗತ್ಯವಿಲ್ಲ. ಪಿತೃತರ್ಪಣದಲ್ಲಿ ಪವಿತ್ರವನ್ನು ಧರಿಸಿದಂತೆ, ಅದನ್ನು ವಿಸರ್ಜಿಸಲೂ ಮರೆಯಬಾರದು. ಪವಿತ್ರ ಹಾಗೂ ಕೂರ್ಚವನ್ನು ಗ್ರಂಥಿಮುಕ್ತ ಮಾಡಿದಾಗ [ ಗಂಟನ್ನು ಬಿಚ್ಚಿದಾಗ ] ಕರ್ತೃವಿಗೆ ಫಲಪ್ರಾಪ್ತಿಯಾಗುತ್ತದೆ ಎಂಬ ಪ್ರಮಾಣ ವಾಕ್ಯವಿದೆ. [ ಪಥಿದರ್ಭಾಶ್ಚಿತೌ ದರ್ಭಾಃ ಯೇದರ್ಭಾ ಯಜ್ಞಭೂಮಿಷು । ತರ್ಪಣಾಸನಪಿಂಡೇಷು ಷಡ್ದರ್ಭಾನ್ ಪರಿವರ್ಜಯೇತ್॥ ಮಾಸೇ ನಭಸ್ಯ ಮಾವಾಸ್ಯಾಂ ಗೃಹೀತಾಶ್ಚೇದ್ದ್ವಿಜೈರ್ಯದಾ। ಅಯಾತ್ತಯಾಮಾಸ್ತೇ ದರ್ಭಾ ನಿಯೋಜ್ಯಾಸ್ತು ಪುನಃ ಪುನಃ॥ ಛಲಾರಿ-ಸ್ಮೃತಿ. ಸಾಗರ ]

**ಸಂಧ್ಯಾಯಾ ವಂದನೇ ಚಾಪಿ ತರ್ಪಣಾದಿಕ ಕರ್ಮಸು । ಧರ್ಭಾಭಾವೇ ತಿಲಾಭಾವೇ ತುಲಸ್ಯೇವ ಫಲಪ್ರದಾ॥** ವರಾಹಪುರಾಣ. ಚಾತುರ್ಮಾಸ್ಯ ಮಹಾತ್ಮೆಯ ಈ ಮಾತಿನಂತೆ ಸಂಧ್ಯಾವಂದನೆ, ತರ್ಪಣವೇ ಮೊದಲಾದ ಕರ್ಮಗಳಲ್ಲಿ ದರ್ಭೆ, ಎಳ್ಳಿನ ಅಭಾವವಿದ್ದರೆ ನಿರ್ಮಾಲ್ಯತುಳಸೀಯಿಂದ ಆ ಕರ್ಮಗಳನ್ನು ಮಾಡಿದಾಗ ಫಲಪ್ರದವಾಗುತ್ತದೆ ಎಂಬುದು ತಿಳಿಯುತ್ತದೆ.

### ೧೧ . ಯಜ್ಞೋಪವೀತದ ಲಕ್ಷಣ

ಹತ್ತಿ, ರೇಷ್ಮೆ, ಗೋವಾಲ [ಹಸುವಿನ ಬಾಲ? ಏಕೆಂದರೆ ಮನುಸ್ಮೃತಿಯಲ್ಲಿ ವೈಶ್ಯನಿಗೆ ಕುರಿಯ ಉಣ್ಣೆಯಿಂದಾದ ಯಜ್ಞೋಪವೀತ ಹೇಳಿದೆ], ಸೆಣಬು, ನಾರು, ಹುಲ್ಲು ಇವುಗಳಲ್ಲಿ ಯಾವುದು ಸಾಧ್ಯವೋ ಅದರಿಂದ ಮಾಡಲ್ಪಟ್ಟವನ್ನು

ದ್ವಿಜಕುಲದವರು ಧರಿಸಬೇಕು. ಶುಚಿಯಾದ ಸ್ಥಳದಲ್ಲಿ, ಶುಚಿಯಾದ ಸೂತ್ರವನ್ನು ಬೆರಳುಗಳ ಮೂಲಕ ಗಟ್ಟಿಯಾಗಿ [ಸೇರಿಸಲ್ಪಟ್ಟಂತೆ] ತೊಂಭತ್ತಾರು ಅಂಗುಲದಷ್ಟು ಮೂರು ಎಳೆಯಲ್ಲಿ ಸುತ್ತುವರೆದಿರುವಂತಹದ್ದನ್ನು ಆಪೋಹಿಷ್ಠಾದಿ ಮಾರ್ಜನ ಮಂತ್ರದಿಂದ ಚೆನ್ನಾಗಿ ಪ್ರೋಕ್ಷಿಸಿ, ಮೂರು ಗಾಯತ್ರೀಯಿಂದಲೂ ಪ್ರೋಕ್ಷಿಸಿ ಹರಿ, ಬ್ರಹ್ಮ, ಈಶ್ವರರನ್ನು ಮೂರು ತಂತುಗಳಲ್ಲೂ ನ್ಯಾಸಮಾಡಿ ಮೂರು ಎಳೆಯೂ ಸೇರಿರುವಂತೆ ಕಟ್ಟಿ [ಬ್ರಹ್ಮಗ್ರಂಥಿಯಿರುವಂತೆ] ಎರಡೂ ಕೈಯಲ್ಲಿ ಹಿಡಿದು ಪ್ರದಕ್ಷಿಣಕಾರವಾಗಿ ವರಣ[ಹಾಕಿಕೊಳ್ಳುವುದು] ಮಾಡಬೇಕು. ಕೂದಲಿ ನಿಂದ ಕೂಡಿದ ಜನಿವಾರವನ್ನು ಕೂದಲು ಇಲ್ಲದಂತೆ ಮಾಡಿ ಹತ್ತು ಗಾಯತ್ರೀ ಮಂತ್ರದಿಂದ ಪ್ರೋಕ್ಷಿಸಿ ನೆನೆಯುವಂತೆ ಮಾಡಿ ಧರಿಸಬೇಕು. ಕತ್ತರಿಸಿದ[ತುಂಡಾದ], ಬಹಿರ್ದೆಶೆಯಲ್ಲಿ ಸೊಂಟದಿಂದ ಕೆಳಗೆಯಿಳಿಯಲ್ಪಟ್ಟ, ಭೋಜನಾನಂತರ ಮಾಡಿದ ಜನಿವಾರವನ್ನು ತ್ಯಜಿಸಬೇಕು. ನಾಭಿಯಿಂದ ಕೆಳಗೂ ಅಥವಾ ನಾಭಿಯಿಂದ ಮೇಲೂ ಜನಿವಾರವನ್ನು ಧರಿಸಬಾರದು. ಬ್ರಹ್ಮಚಾರಿ ಒಂದನ್ನೂ, ಸ್ನಾತಕ ಎರಡು, [ಗುರುಕುಲದಲ್ಲಿ ಸಾಂಗ ಅಧ್ಯಯನ ಮುಗಿಸಿದವ ಸ್ನಾತಕ ಸಾಮಾನ್ಯವಾಗಿ ಗೃಹಸ್ಥ], ಅಥವಾ ಹೆಚ್ಚು ಧರಿಸಬಹುದು. ಶ್ರೌತಸ್ಮಾರ್ತ ಕರ್ಮಗಳಲ್ಲಿ ಗೃಹಸ್ಥನು ಎರಡು ಉಪವೀತಗಳನ್ನು ಧರಿಸಬೇಕು. ಧರಿಸುವಾಗ "ಯಜ್ಞೋಪವೀತಂ ಪರಮಂ ಪವಿತ್ರಂ" ಯೆಂಬ ಮಂತ್ರವನ್ನು ಹೇಳಬೇಕು. ಮೇಲುವಸ್ತ್ರದ ಅಭಾವದಲ್ಲಿ ತೃತೀಯ ಸೂತ್ರವನ್ನು ಧರಿಸಬಹುದು. ಬ್ರಹ್ಮಸೂತ್ರ ಎಡ ಹೆಗಲಮೇಲಿರುವುದು ಯಜ್ಞೋಪವೀತಿಯೆನಿಸುತ್ತದೆ, ಬಲಹೆಗಲ ಮೇಲಿರುವುದು ಪ್ರಾಚೀನಾವೀತಿ ಯೆನಿಸುತ್ತದೆ, ಕುತ್ತಿಗೆಯನ್ನು ಸುತ್ತಿರುವುದು ನಿವೀತಿಯೆನಿಸುತ್ತದೆ. [ಕಾರ್ಪಾಸ ಕ್ಷೌಮಗೋವಾಲ ಶಣವಲ್ಕ ತೃಣಾದಿಕಂ । ಯಥಾಸಂಭವತೋ ಧಾರ್ಯಮುಪವೀತಮ್ ದ್ವಿಜಾತಿಭಿಃ ॥ ಶುಚೌ ದೇಶೇ ಶುಚಿಃ ಸೂತ್ರಂ ಸಂಹತಾಂಗುಲಿ ಮೂಲಕೇ । ಆವೇಷ್ಟ್ಯ ಷಣ್ಣವತ್ಯಾ ತ್ರಿಗುಣೀಕೃತ ಚ ॥ ವಿಚ್ಛಿನ್ನಂ ಚಾಪ್ಯಧೋ ಯಾತಂ ಭುಕ್ತ್ವಾ ನಿರ್ಮಿತಮುತ್ಸೃಜೇತ್ । ಪೃಷ್ಠದೇಶೇ ಚ ನಾಭ್ಯಾಂ ಚ ಧೃತಂ ಯದ್ವಿಂದತೇ ಕಟಿಂ ॥ ತದ್ಧಾರ್ಯಮುಪವೀತಂ ಸ್ಯಾನ್ನಾತಿಲಂಬಂ ನ ಚೋಚ್ಛ್ರಿತಮ್ । ಸ್ತನಾದೂರ್ಧ್ವಮಧೋ ನಾಭೇರ್ಧಾರ್ಯಂ ಸ್ಯಾನ್ನ ಕಥಂಚನ ॥ ಬ್ರಹ್ಮಚಾರಿಣ ಏಕಂ ಸ್ಯಾತ್ ಸ್ನಾತಸ್ಯ ದ್ವೇ ಬಹೂನಿ ವಾ । ಗೃಹಸ್ಥೇನ ತು ದ್ವೇ ಧಾರ್ಯೇ

ಶ್ರೌತೇ ಸ್ಮಾರ್ತೇ ಚ ಕರ್ಮಣಿ ॥ ಯಜ್ಞೋಪವೀತಂ ಪರಮಮಿಮಂ ಮಂತ್ರಮುದೀ ರಯನ್ । ತೃತೀಯಮುತ್ತರೀಯಂ ಸ್ಯಾದ್ವಸ್ತ್ರಾಭಾವೇ ತದಿಷ್ಯತೇ ॥ ಬ್ರಹ್ಮ ಸೂತ್ರೇ ತು ಸವ್ಯೇಽಂಸೇ ಸ್ಥಿತೇ ಯಜ್ಞೋಪವೀತಿತಾ । ಪ್ರಾಚೀನಾವೀತಿ ತಾಽಸವ್ಯೇ ಕಂಠಸ್ಥೇ ತು ನಿವೀತಿತಾ ॥ ವಸ್ತ್ರಂ ಯಜ್ಞೋಪವೀತಾರ್ಥೇ ತ್ರಿವೃತ್ ಸೂತ್ರಂ ತು ಕರ್ಮಸು । ಕುಶಮುಂಜವಾಲತಂತು ರಜ್ಜುರ್ವಾ ಸರ್ವಕರ್ಮಸು ॥] ಭಾರದ್ವಾಜರು– ಬಲಭುಜವನ್ನು ಬಿಟ್ಟಂತೆ ಎಡಭುಜದ ಮೇಲಿರುವ ಯಜ್ಞೋಪವೀತವು ದೇವಕಾರ್ಯದಲ್ಲಿ ಪ್ರಶಸ್ತ, ಕುತ್ತಿಗೆಯನ್ನು ಅವಲಂಬಿಸಿರುವಂತೆ ಅಂದರೆ ಮಾಲಾಕಾರವಾಗಿರುವ ಯಜ್ಞೋಪವೀತ ಋಷಿಕಾರ್ಯದಲ್ಲಿ ಪ್ರಶಸ್ತ ಇದನ್ನು ನೀವೀತಿ ಯೆನ್ನುತ್ತಾರೆ. ಅಂತೆಯೇ ಎಡಭುಜವನ್ನು ಬಿಟ್ಟಿರುವಂತೆ ಬಲಹೆಗಲಿನ ಮೇಲಿರುವ ಯಜ್ಞೋಪವೀತವು ಪ್ರಾಚೀನಾವೀತಿಯೆನಿಸಿ ಪಿತೃಕಾರ್ಯದಲ್ಲಿ ಪ್ರಶಸ್ತವೆಂದು ಹೇಳಿದ್ದಾರೆ. [ದಕ್ಷಿಣಂ ಬಾಹುಮುದ್ಧೃತ್ಯ ವಾಮಸ್ಕಂಧೇ ನಿವೇಶಿತಂ । ಯಜ್ಞೋಪವೀತಮಿತ್ಯುಕ್ತಂ ದೇವಕಾರ್ಯೇಷು ಶಸ್ಯತೇ ॥ ಕಂಠಾವಲಂಬಿತಂ ಚೈವ ಬ್ರಹ್ಮಸೂತ್ರಂ ಯಥಾ ಭವೇತ್ । ತನ್ನೀವೀತಮಿತಿ ಖ್ಯಾತಂ ಶಸ್ತಂ ಕರ್ಮಣಿ ಮಾನುಷೇ ॥ ಉತ್ಕ್ಷಿಪ್ತೇ ವಾಮಬಾಹೌ ಚ ದಕ್ಷಿಣಸ್ಕಂಧಮಾಶ್ರಿತಂ ಪ್ರಾಚೀನಾವೀತಮಿತ್ಯಾಹುಸ್ತತ್ಪಿತ್ರ್ಯೇಷ್ವೇವ ಕರ್ಮಸು॥ – ಭಾರದ್ವಾಜಃ.]

## ೧೨ . ಪಾತ್ರೆ, ಜಲಾಂಜಲಿ, ದರ್ಭೆಯ ವಿಚಾರ

ವಸಿಷ್ಠರು – ಋಕ್, ಯಜುರ್, ಸಾಮ, ಅಥರ್ವ ವೇದೋಕ್ತ ಮಂತ್ರಗಳನ್ನು ಜಪಿಸಿ ಅಂದರೆ ಸ್ವಶಾಖಾಧ್ಯಯನಾನಂತರ ದೇವ, ಋಷಿ, ಪಿತೃ ತರ್ಪಣಗಳನ್ನು ಮಾಡಬೇಕೆಂದಿದ್ದಾರೆ. ಅಧ್ಯಾತ್ಮಿಕವಿದ್ಯೆಯೆಂದೆನಿಸಿ ಪ್ರಸಿದ್ಧವಾದ ಬ್ರಹ್ಮಯಜ್ಞ ಹಾಗೂ ಪ್ರಣವಜಪಗಳ ಯಥಾಶಕ್ತಿ ಜಪಾನಂತರ ತರ್ಪಣವನ್ನು ಆಚರಿಸಬೇಕು. ದೇವ, ಋಷಿ, ಪಿತೃಭೇದದಿಂದ ವ್ಯಾಸರಿಂದ ಜಲಾಂಜಲಿ ಭೇದವೂ ಹೇಳಲ್ಪಟ್ಟಿದೆ. ದೇವತೆಗಳಿಗೆ ಒಂದು ಅಂಜಲಿ [ ಬೊಗಸೆ ] ಸನಕಾದಿ ಋಷಿಗಳಿಗೆ ಎರಡೆರಡು ಅಂಜಲಿ, ಪಿತೃಗಳಿಗೆ ಮೂರುಮೂರು ಅಂಜಲಿ ನೀರು. ಮಾತೃವರ್ಗದ ಸ್ತ್ರೀಯರನ್ನು [ದ್ವಾದಶ ಪಿತೃವರ್ಗದಲ್ಲಿ ಬರುವವರು ], ಹೊರತುಪಡಿಸಿ ಉಳಿದ ಸ್ತ್ರೀವರ್ಗದವರಿಗೆ ಒಂದೊಂದು ಅಂಜಲಿ ನೀರು. ಬೃಹಸ್ಪತಿ ಸ್ಮೃತಿಯಲ್ಲಿಯೂ, ದೇವತೆಗಳ ಪ್ರೀತ್ಯರ್ಥವಾಗಿ ಮೂರು ಮೂರು ಅಂಜಲಿ ನೀಡಬಾರದೆಂದಿದ್ದಾರೆ. ಋಷಿಗಳಿಗೆ ಯಾವ ರೀತಿ ಎರಡೆರಡು ಅಂಜಲಿಗಳೋ

ಅದರಂತೆಯೇ ಪ್ರಜಾಪತಿ ಎಂದರೆ ಬ್ರಹ್ಮನಿಗೆ ಎರಡಂಜಲಿಯು,ಪಿತೃಗಳ ಪ್ರೀತ್ಯರ್ಥವಾಗಿ ಮೂರುಮೂರು ಅಂಜಲಿ ನೀರು ಎಲ್ಲೈ ರಾಜನೇ! ಎಂದು ವಿಷ್ಣುಪುರಾಣ. ತೃತೀಯಾಂಶ–ಅಧ್ಯಾಯ–೧೧ರಲ್ಲಿ ಹೇಳಿದೆ ಇಲ್ಲಿ ಸ್ವಶಾಖೆ [ ತಮ್ಮ ತಮ್ಮ ಶಾಖೆಗಳಂತೆ ] ಯಾವ ಯಾವ ವ್ಯವಸ್ಥೆಯಿದೆಯೋ ಅದರಂತೆ ಆಚರಿಸಬೇಕು.

ಈ ಬ್ರಹ್ಮಯಜ್ಞಾನಂತರ ತರ್ಪಣವನ್ನು ನೀರಿನಲ್ಲಿ ಮಾಡಬಾರದೆಂದು ಗೋಭಿಲರು ನಿಷೇಧಿಸಿರುತ್ತಾರೆ. ಆ ವಾಕ್ಯ ಈ ರೀತಿಯಾಗಿದೆ– "ನೀರಿನಲ್ಲಾಗಲೀ, ಪಾತ್ರೆಯಲ್ಲಾಗಲೀ, ಕೋಪದಿಂದಾಗಲೀ ಒಂದೇ ಹಸ್ತದಿಂದಾಗಲೀ ಕೊಟ್ಟಂತಹ ನೀರು ಭೂಮಿಯಲ್ಲಿ ಇಂಗದಿರುವುದರಿಂದ ಪಿತೃಗಳಿಗೆ ಸೇರುವುದಿಲ್ಲವೆಂದು." ಈ ಕ್ರಮಕ್ಕೆ ಹಾರೀತರು–ಒಣಗಿದ ವಸ್ತ್ರ ಧರಿಸಿದ ನಂತರ ನೆಲದಲ್ಲಿ ದರ್ಭೆಯನ್ನು ಹರಡಿ ತರ್ಪಣವನ್ನು ಮಾಡಬೇಕು. ಪಾತ್ರೆಯಲ್ಲೆಂದಿಗೂ ಮಾಡಬಾರದೆಂದಿದ್ದಾರೆ. ಇಲ್ಲಿರುವ ಪಾತ್ರೆಯೆಂಬ ಶಬ್ದಕ್ಕೆ "ಮಣ್ಣಿನಿಂದ ಮಾಡಲ್ಪಟ್ಟ ಪಾತ್ರೆಯೆಂದರ್ಥ." ಏಕೆಂದರೆ ಪಿತಾಮಹ ಸ್ಮೃತಿಯಲ್ಲಿ– ಚಿನ್ನ, ಬೆಳ್ಳಿ, ತಾಮ್ರ ಅಥವಾ ಕಂಚಿನಿಂದಾದ ಪಾತ್ರೆ ಪಿತೃತರ್ಪಣದಲ್ಲಿ ಗ್ರಾಹ್ಯ , ಮೃಣ್ಮಯಪಾತ್ರೆ ಅಗ್ರಾಹ್ಯವೆಂದಿದೆ.

ದರ್ಭೆಯನ್ನು ಹರಡುವಲ್ಲಿ ಯೋಗ ಯಾಜ್ಞವಲ್ಕ್ಯರು – ಈ ವಿಶೇಷ ನಿಯಮವನ್ನು ಹೇಳುತ್ತಾರೆ – "ಅಪಾಂಹ್ಯಪೂರ್ವ"ಯೆಂಬ ಮಂತ್ರದಿಂದ ಬಹಳ ಸಂಖ್ಯೆಯಲ್ಲಿರುವ ದರ್ಭೆಯನ್ನು ಶುಚಿಸ್ಥಳದಲ್ಲಿ ಹಾಸಿ ದರ್ಭೆಯ ಮುಂಭಾಗ [ ಅಗ್ರ ] ದಲ್ಲಿ ದೇವತೆಗಳಿಗೂ, ದರ್ಭೆಯ ಬುಡದಲ್ಲಿ ಪಿತೃಗಳಿಗೂ ತರ್ಪಣ ನೀಡಬೇಕು, [ ದರ್ಭೆಯ ಮಧ್ಯದಲ್ಲಿಋಷಿತರ್ಪಣ ] , ಶುಚಿಸ್ಥಳಾಭಾವವಿದ್ದರೆ ವಿಷ್ಣುಸ್ಮೃತಿಯ ಈ ಮುಂದಿನ ವಾಕ್ಯದಂತೆ ನೀರಿನಲ್ಲಿ ಕೊಡಬೇಕು.

" ಎಲ್ಲಿ ಅಶುಚಿ ಸ್ಥಳವಿದೆಯೋ ಅಲ್ಲಿ ತರ್ಪಣ ಕೊಡದೆ, ಜಲದಲ್ಲಿ ದೇವ, ಪಿತೃ ತರ್ಪಣಗಳನ್ನು ಕೊಡಬೇಕು, ಏಕೆಂದರೆ ನೀರಿನಿಂದಲೇ ಎಲ್ಲವೂ ಧರಿಸಲ್ಪಟ್ಟಿದೆ." ಇದೇ ಅಭಿಪ್ರಾಯದಿಂದಲೇ ಕಾರ್ಷ್ಣಾಜಿನಿಗಳು – ದೇವತೆಗಳ ಹಾಗೂ ಪಿತೃಗಳ ಜಲತರ್ಪಣವು ಜಲಾಶಯದಲ್ಲಿಯೇ ನೀಡಬೇಕು. ಸಂಸ್ಕಾರ [ಕನ್ಯೆಗೆ ವಿವಾಹ, ಬಾಲಕನಿಗೆ ಉಪನಯನ ಸಂಸ್ಕಾರ] ವಿಲ್ಲದೆ ಮರಣ ಹೊಂದಿದವರಿಗೆ, ಜಲಾಶಯದ ದಡದ ಭೂಮಿಯಲ್ಲಿ ಒಂದು ಜಲಾಂಜಲಿಯನ್ನು ನೀಡಬೇಕು ಎಂದಿದ್ದಾರೆ. ಬೋಧಾಯನರೂ ಕೂಡ ಸಂಸ್ಕೃತರಾದವರಿಗೆ

ಮೂರುಮೂರು ಜಲಾಂಜಲಿ, ಅಸಂಸ್ಕೃತರಿಗೆ ಒಂದು ಜಲಾಂಜಲಿ ದಡದಲ್ಲಿ ಹಾಕಬೇಕೆಂದಿದ್ದಾರೆ. ಈ ವಿಧಿಯ ಮಂತ್ರವು – ಅಗ್ನಿದಗ್ಧರಾಗಲೀ, ಅಗ್ನಿಯಿಂದ ದಗ್ಧರಾಗದವರಾಗಲೀ ನಮ್ಮ ಕುಲದಲ್ಲಿದ್ದರೆ ಅವರಿಗೆ ಪರಗತಿಯು ನಾನು ನೀಡಿದ ಈ ಜಲಾಂಜಲಿ ಯಿಂದುಂಟಾಗಲೀ ಎಂಬುದಾಗಿದೆ. [ಶ್ರೀಕೃಷ್ಣಾಚಾರ್ಯ ಸ್ಮೃತಿಮುಕ್ತಾವಲಿಃತತ್ರ ವಸಿಷ್ಠಃ–ಋಕ್ಸಾಮಾಥರ್ವವೇದೋಕ್ತಾನ್ ಜಪ್ಯ ಮಂತ್ರಾನ್ ಯಜೂಂಷಿ ಚ । ಜಪಿತ್ವೈವ ತತಃ ಕುರ್ಯಾದ್ದೇವರ್ಷಿಪಿತೃ ತರ್ಪಣಂ ॥ ಇತಿ ॥ ಬ್ರಹ್ಮಯಜ್ಞ ಪ್ರಸಿದ್ಧ್ಯರ್ಥಂ ವಿದ್ಯಾಂ ಚಾಧ್ಯಾತ್ಮಿಕೀಂ ಜಪೇತ್ । ಜಪ್ತ್ವಾ ವಾ ಪ್ರಣವಂ ಶಕ್ತ್ಯಾ ತತಸ್ತರ್ಪಣಮಾಚರೇತ್ ॥ ಅತ್ರ ದೇವಾದಿ ಭೇದೇನ ಅಂಜಲಿ ಸಂಖ್ಯಾಭೇದೋ ದರ್ಶಿತಃ ವ್ಯಾಸೇನ–ಏಕೈಕಮಂಜಲಿಂ ದೇವಾ ದ್ವೌದ್ವೌ ಚ ಸನಕಾದಯಃ । ಅರ್ಹಂತಿ ಪಿತರಃ ತ್ರೀನ್‌ಸ್ತ್ರೀನ್ ಸ್ತ್ರಿಯಶ್ಚೈಕೈಕ ಮಂಜಲಿಂ ॥ ಬೃಹಸ್ಪತಿಃ–ತ್ರಿರಪಃ ಪ್ರೀಣನಾರ್ಥಾಯ ದೇವಾ ನಾಮಪಿ ವರ್ಜಯೇ।ಅಥರ್ಷೀಣಾಂ ಯಥಾನ್ಯಾಯಂ ಸಕೃಚ್ಚಾಪಿ ಪ್ರಜಾಪತೇಃ ॥ ಪಿತೄಣಾಂ ಪ್ರೀಣನಾರ್ಥಾಯ ತ್ರಿರಪಃ ಪೃಥವೀಪತೇ ॥ ಇತಿ ॥ ಅತ್ರ ಯಥಾ ಸ್ವ ಶಾಖಂ ವ್ಯವಸ್ಥಾ । ಸ್ವಶಾಖಾಯಾಮನಾಮ್ನಾತೇ ತು ವಿಕಲ್ಪ ಏವ । ಇದಂ ಚ ತರ್ಪಣಂ ನೋದಕಾದೌ ಕಾರ್ಯಮಿತ್ಯಾಹ ಗೋಭಿಲಃ –ನೋದಕೇಷು ನ ಪಾತ್ರೇಷು ನ ಕ್ರುದ್ಧೋ ನೈಕಪಾಣಿನಾ । ನೋಪತಿಷ್ಠತಿ ತತ್ತೋಯಂ ಯನ್ನ ಭೂಮೌ ಪ್ರಲೀಯತೇ ॥ ಇತಿ ॥ ತತ್ರ ವಿಶೇಷಮಾಹ ಹಾರೀತಃ – ವಸಿತ್ವಾ ವಸನಂ ಶುಷ್ಕಂ ಸ್ಥಲೇ ವಿಸ್ತೀರ್ಣ ಬರ್ಹಿಷಿ । ವಿಧಿಜ್ಞಸ್ತರ್ಪಣಂ ಕುರ್ಯಾ ನ್ನಪಾತ್ರೇಷು ಕದಾಚನ ॥ ಇತಿ ॥ಮೃಣ್ಮಯ ಪಾತ್ರೇ ನ ಕರ್ತವ್ಯ ಮಿತ್ಯರ್ಥಃ॥ ಅತ ಏವ ಪಿತಾಮಹಃ – ಹೇಮರೌಪ್ಯಮಯಂ ಪಾತ್ರಂ ತಾಮ್ರಕಾಂಸ್ಯ ಸಮುದ್ಭವಂ । ಪಿತೄಣಾಂ ತರ್ಪಣೇ ಪಾತ್ರಂ ಮೃಣ್ಮಯಂ ತುಪರಿತ್ಯಜೇತ್ ॥ ದರ್ಭಾಸ್ತರಣೇ ವಿಶೇಷಮಾಹ ಯೋಗಯಾಜ್ಞವಲ್ಕ್ಯಃ–ಅಪಾಂ ಹ್ಯಪೂರ್ವ ವನ್ಮಂತ್ರೈರಾಸ್ತೀರ್ಯ ಚ ಕುಶಾನ್ ಬಹೂನ್ । ಪ್ರಾಗಗ್ರೇಷು ಸುರಾನ್ ಸಮ್ಯಗ್ದಕ್ಷಿಣಾಗ್ರೇಷು ವೈ ಪಿತೄನ್ ॥ ತರ್ಪಯೇದಿತಿ ಶೇಷಃ । ಶುಚಿಸ್ಥಲಾಭಾವೇ ಜಲೇದಿತ್ಯಾಹ ವಿಷ್ಣುಃ – ಯತ್ರಾಶುಚಿಸ್ಥಲಂ ವಾ ಸ್ಯಾದುದಕೇ ದೇವತಾಃ ಪಿತೄ ನ್ । ತರ್ಪಯೇತ್ತು ಯಥಾಕಾಮಮಪ್ಸು ಸರ್ವಂ ಪ್ರತಿಷ್ಠಿತಮ್ ॥ ಇತಿ ॥ ಅನೇನೈವಾಭಿಪ್ರಾಯೇಣ ಕಾರ್ಷ್ಣಾಜಿನಿಃ – ದೇವತಾನಾಂ ಪಿತೄಣಾಂ ಚ ಜಲೇ ದದ್ಯಾಜ್ಜಲಾಂಜಲಿಮ್ । ಅಸಂಸ್ಕೃತ ಪ್ರಮೀತಾನಾಂ ಸ್ಥಾನೇ ದದ್ಯಾಜ್ಜಲಂ ಪು

ಪುನಃ ॥ ಅಸಂಸ್ಕೃತ ಪ್ರಮೀತಾನಾಂ ಅಂಜಲಿ ಸಂಖ್ಯಾ ನಿಯಮಮಾಹ ಬೋಧಾಯನಃ – ಜಲಂಜಲಿ ತ್ರಯಂ ದದ್ಯಾದ್ಯೇಚಾನ್ಯೇ ಸಂಸ್ಕೃತಾ ಭುವಿ । ಅಸಂಸ್ಕೃತ ಪ್ರಮೀತಾನಾಮೇಕಮೇವ ತಟೇ ಕ್ಷಿಪೇತ್ ॥ ಅತ್ರಾಯಂ ಮಂತ್ರಃ – ಅಗ್ನಿದಗ್ಧಾಶ್ಚ ಯೇ ಜಾತಾ ಯೇ ವಾ ದಗ್ಧಾಃ ಕುಲೇ ಮಮ । ಭೂಮೌ ದತ್ತೇನ ತೋಯೇನ ತೃಪ್ತಾ ಯಾಂತು ಪರಾಂ ಗತಿಮ್ ॥ ಇತಿ ॥ ]

## ೧೩. ತಿಲದ ವಿಚಾರ

ರಾಮಾಯಣದಲ್ಲಿಯಾದರೋ – ಶ್ರಾದ್ಧಕ್ರಿಯೆಯಲ್ಲಿ ಶ್ರಾದ್ಧಕರ್ತ, ವಿಪ್ರಪೂಜಾನಂತರ, ಪಿಂಡದಾನಾನಂತರ ಕಾಲನ್ನು ತೊಳೆಯದಿದ್ದರೆ [ ಪಾದ ಶೌಚ ] , ಪಿಂಡಕ್ಕೆ ಅಭ್ಯಂಗಕ್ಕಾಗಿ ತಿಲೋದಕ ಹಾಗೂ ತರ್ಪಣಕ್ಕಾಗಿ ಎಳ್ಳನ್ನು ಉಪಯೋಗಿಸದಿದ್ದರೆ, ದಕ್ಷಿಣೆಯಿಲ್ಲದಿದ್ದರೆ ಶ್ರಾದ್ಧಕ್ರಿಯೆಯು ಫಲಪೂರ್ತಿಯನ್ನುಂಟು ಮಾಡುವುದಿಲ್ಲವೆಂದಿದ್ದಾರೆ. [ ರಾಮಾಯಣೇ–ಪಾದಶೌಚ ಮನಭ್ಯಂಗ ತಿಲಹೀನಂ ತು ತರ್ಪಣಮ್ । ಸರ್ವಂ ತದ್ವಿಫಲಂ ದೇವಿ ಯಚ್ಚ ಶ್ರಾದ್ಧಮದಕ್ಷಿಣಮ್ ॥ ಇತಿ ॥ ] , ತಿಲಮಿಶ್ರಿತ ನೀರು ಶ್ರಾದ್ಧದಲ್ಲಿ ಕೊಡಲ್ಪಟ್ಟರೆ ಅದು ಪಿತೃಗಳಿಗೆ ಕಾಮಧೇನುವನ್ನು ಕೊಟ್ಟಂತೆ ಆಗುತ್ತದೆ–ಇದು ಶ್ರಾದ್ಧ ರಹಸ್ಯವೆಂದು ಭೃಗುಸ್ಮೃತಿಯಲ್ಲಿದೆ.

ಹಸ್ತದಲ್ಲಿ ಬೆಳ್ಳಿ, ಚಿನ್ನ ಅಥವಾ ತಾಮ್ರದ ಪವಿತ್ರವಿಲ್ಲದೆ, ಎಳ್ಳಿಲ್ಲದೆ, ಮಂತ್ರವಿಲ್ಲದೆ [ಸ್ವಧಾಕಾರ] ಪಿತೃಗಳು ಬರಲಾರರೆಂದು ಮರೀಚಿಗಳು ಹೇಳುತ್ತಾರೆ. [ ಮರೀಚಿರಪಿ–ವಿನಾ ರೌಪ್ಯ ಸುವರ್ಣೇನ ವಿನಾ ತಾಮ್ರತಿಲೈಸ್ತಥಾ। ವಿನಾ ಮಂತ್ರೈಶ್ಚ ದರ್ಭೈಶ್ಚ ಪಿತೃಣಾಂ ನೋಪತಿಷ್ಠತೇ ॥ ] ಬೆಳ್ಳಿಯಿದ್ದಾಗ ಮನೋವೇಗದಿಂದ, ಸುವರ್ಣವಿದ್ದಾಗ ಕೈಚಾಚುವಷ್ಟರಲ್ಲಿ, ತಾಮ್ರವಿದ್ದಾಗ ದ್ವಿಮುಹೂರ್ತದಲ್ಲಿ, ತಿಲೋದಕದಿಂದ ತಕ್ಷಣದಲ್ಲಿ, ದರ್ಭೆಯಿದ್ದಾಗ ಏಳು ಮುಹೂರ್ತಗಳ ಕಾಲ, ಮಂತ್ರಸಹಿತವಿದ್ದಾಗ ಚಿರಕಾಲ ಪಿತೃಗಳು [ತರ್ಪಣ ಸ್ಥಳದಲ್ಲಿ ] ಇರುತ್ತಾರೆ. [ರಜತೇ ಮನಸಾ ಯಾತಿ ಸುವರ್ಣೇ ಹಸ್ತನಿಃಸೃತಮ್ । ದ್ವಿಮುಹೂರ್ತೇನ ತಾಮ್ರೇ ತು ಆಶ್ವೇವ ತು ತಿಲೋದಕಮ್ ॥ ದರ್ಭೈಃ ಸಪ್ತಮುಹೂರ್ತೇನ ಮಂತ್ರಮುಕ್ತಂ ತಥಾಽಕ್ಷಯಮ್ ॥ ಇತಿ ಸ್ಮೃತಿದೀಪಿಕಾಯಾಮ್ ॥ ] ಬಿಳಿ ಎಳ್ಳಿನಿಂದ ದೇವತೆಗಳನ್ನು, ಶಬಲ

ಅಂದರೆ ಕಪ್ಪುಬಿಳಿ ಮಿಶ್ರಿತ ಎಳ್ಳಿನಿಂದ ಋಷಿಗಳನ್ನು, ಕಪ್ಪಾದ ಎಳ್ಳಿನಿಂದ ಪಿತೃಗಳನ್ನು ತರ್ಪಿಸಬೇಕೆಂದು ಗೋಭಿಲರು ಹೇಳುತ್ತಾರೆ. [ ಶುಕ್ಲೈಸ್ತು ತರ್ಪಯೇದ್ದೇವಾನ್ ಮನುಷ್ಯಾಂಛಬಲೈಸ್ತಿಲೈಃ । ಪಿತ್ರ್ಯಾಂಸ್ತು ತರ್ಪಯೇತ್ ಕೃಷ್ಣೈಸ್ತರ್ಪಯೇದ್ಸದಾ ದ್ವಿಜಃ ॥ ] ಮೊದಲೇ ಎಳ್ಳನ್ನು ಮಿಶ್ರ ಮಾಡಿ ಎಳ್ಳುಸಹಿತವಾಗಿರುವ ನೀರಿನಿಂದಾಗಲೀ ಅಥವಾ ಎಡಗೈನಿಂದ ಎಳ್ಳನ್ನು ಎತ್ತಿಯಾಗಲೀ ತರ್ಪಣ ನೀಡಬೇಕೆಂದು ಯಾಜ್ಞವಲ್ಕ್ಯರು ಹೇಳುತ್ತಾರೆ. ಋಗ್ವೇದಿಗಳು ತಿಲತರ್ಪಣಕ್ಕೆ ಎಳ್ಳನ್ನು ತಿಲಪಾತ್ರೆಯಿಂದಾಗಲೀ ಅಥವಾ ಎಡಗೈನಿಂದಾಗಲೀ ತೆಗೆದುಕೊಳ್ಳಬೇಕು. ಆದರೆ ಯಜುರ್ವೇದಿಗಳು ಎಳ್ಳನ್ನು ಬಲಗೈ ಮಣಿಬಂಧದಿಂದ ಅದ್ದಿ ತೆಗೆದುಕೊಳ್ಳಬೇಕು. ರೋಮಕೂಪದ ಅಂದರೆ ಕೂದಲುಳ್ಳ ಕೈಹಿಂಭಾಗದಿಂದ ಎಳ್ಳನ್ನು ತರ್ಪಣಕ್ಕೆ ಎತ್ತಿಕೊಂಡರೆ ಆ ಎಳ್ಳು ಪಿತೃಘಾತಿಯಾಗುತ್ತದೆ. [ ಯೋಗಯಾಜ್ಞವಲ್ಕ್ಯಃ – ಯೇಚ ಪಾಣಿಸ್ಥಲೇ ಸ್ಪೃಷ್ಟಾ ರೋಮಕೂಪೇ ತು ಯೇ ಧೃತಾಃ । ತೈಸ್ತಿಲೈಸ್ತರ್ಪಣಂ ಕುರ್ವನ್ ಪಿತೃಘಾತೀ ಭವೇದ್ವಿಜಃ ॥ ] , ರೋಮಕೂಪದ ಅಂದರೆ ಕೂದಲುಳ್ಳ ಕೈಹಿಂಭಾಗದಿಂದ ಎಳ್ಳನ್ನು ಎತ್ತಿಕೊಂಡು ತರ್ಪಿಸಿದರೆ ಆ ತರ್ಪಣವು ರಕ್ತ ಹಾಗೂ ಮಲದಿಂದ ಪಿತೃಗಳಿಗೆ ನೀಡಿದ ತರ್ಪಣವಾಗುತ್ತದೆ. ಆದ್ದರಿಂದ ಎಳ್ಳಿಗೆ ರೋಮ ಸಂಪರ್ಕವಾಗದಂತೆ [ ಕೈ ಹಿಂಭಾಗ ತಾಕದಂತೆ ] ನೋಡಿಕೊಳ್ಳಬೇಕು. [ ರೋಮಸಂಸ್ಥಾಂಸ್ತಿಲಾನ್ಕೃತ್ವಾ ಯಸ್ತು ತರ್ಪಯತೇ ಪಿತ್ರ್ಯಾನ್ । ಪಿತರಸ್ತರ್ಪಿತಾ ಸ್ತೇನ ರುಧಿರೇಣ ಮಲೇನ ವಾ ॥ ]

## ೧೪. ಹೆಸರು, ಗೋತ್ರ, ನಿಯಮ

ಹೆಸರು ಗೋತ್ರ ಸ್ವಧಾಪೂರ್ವಕವಾಗಿ ಸವರ್ಣದವರಿಗೆ [ ಸ್ವ ಜಾತಿಯ ವರಿಗೆ ] ಜಲಾಂಜಲಿ ನೀಡಬೇಕು. ಅಸವರ್ಣದವರಿಗೆ ನೀಡಬಾರದು ಎಂದು ಯೋಗಯಾಜ್ಞವಲ್ಕ್ಯರು ಹೇಳಿದ್ದಾರೆ. ಬೋಧಾಯನರೂ ತರ್ಪಣ ಗ್ರಹಣದಲಿ ಬ್ರಾಹ್ಮಣನಿಗೆ ಹೆಸರಿನ ಕೊನೆಯಲ್ಲಿ ಶರ್ಮನೆಂದು, ಕ್ಷತ್ರಿಯನಿಗೆ ವರ್ಮನೆಂದು, ವೈಶ್ಯನಿಗೆ ಗುಪ್ತನೆಂದು, ಶೂದ್ರನಿಗೆ ದಾಸನೆಂದು ಸೇರಿಸಬೇಕೆಂದು ವಿಶೇಷ ನಿಯಮವನ್ನು ಹೇಳಿದ್ದಾರೆ. ನಾಲ್ಕೂ ವರ್ಣದವರಿಗೂ ಅವರವರ ಪಿತೃ ಗೋತ್ರವೇ ಗ್ರಾಹ್ಯ. ಮದುವೆಯಿಲ್ಲದ ಕನ್ಯೆಗೆ ಪಿತೃಗೋತ್ರ, ಮದುವೆಯಾದವರಿಗೆ ಗಂಡನ ಗೋತ್ರ ತರ್ಪಣಕ್ಕೆ ಗ್ರಾಹ್ಯ. ತನ್ನ ವರ್ಣ ಹೊರತುಪಡಿಸಿ ಅನ್ಯರಿಗೆ

ಸ್ವಧಾಪೂರ್ವಕ ತರ್ಪಣವಿಲ್ಲ. [ ನಾಮಗ್ರಹಣೇ ವಿಶೇಷಮಾಹ ಬೋಧಾಯನಃ – ಶರ್ಮಾಂತಂ ಬ್ರಾಹ್ಮಣಸ್ಯೋಕ್ತಂ ವರ್ಮಾಂತಂ ಕ್ಷತ್ರಿಯಸ್ಯ ತು । ಗುಪ್ತಾಂತಂ ಚೈವ ವೈಶ್ಯಸ್ಯ ದಾಸಾಂತಂ ಶೂದ್ರಜನ್ಮನಃ ॥ ಚತುರ್ಣಾಮಪಿ ವರ್ಣಾನಾಂ ಪಿತೄಣಾಂ ಪಿತೃಗೋತ್ರತಃ । ಪಿತೃಗೋತ್ರಂ ಕುಮಾರೀಣಾಮೂಢಾನಾಂ ಭರ್ತೃಗೋತ್ರತಃ ॥ ಇತಿ ॥ ಶ್ರೀಕೃಷ್ಣಾಚಾರ್ಯ ಸ್ಮೃತಿಮುಕ್ತಾವಲಿಃ ] ಬೋಧಾಯನರೂ ಪಿತೃತರ್ಪಣದಲ್ಲಿ ತರ್ಪಣಾಧಿಕಾರಿಯು ತನ್ನಿಂದ ತರ್ಪಣಕ್ಕೆ ಅರ್ಹರಾದವರ ಸಂಬಂಧ, ಹೆಸರು, ಗೋತ್ರ ಹಾಗೂ ವಸು ರುದ್ರ, ಆದಿತ್ಯ ರೂಪಗಳಲ್ಲಿ ಪಿತೃಗಳ ಕ್ರಮ, ಸ್ವಧಾ ಹಾಗೂ ನಮಃ ಶಬ್ದಗಳೊಂದಿಗೆ ಪಿತೃತರ್ಪಣ ನೀಡಬೇಕೆನ್ನುತ್ತಾರೆ. [ ಪಿತೃತರ್ಪಣೇ ಸ್ವಸಂಬಂಧಾದಿಕಂ ಚ ಗ್ರಾಹ್ಯಮ್ – ಸಂಬಂಧನಾಮಗೋತ್ರಾಣಿ ತಥಾ ವಸ್ವಾದಿರೂಪತಾಮ್ । ಸ್ವಧಾಶಬ್ದಂ ನಮಃ ಶಬ್ದಮುಕ್ತ್ವಾ ಸಂತರ್ಪಯೇತ್ ಪಿತೄನ್ ॥ ಇತಿ ಬೋಧಾಯನೋಕ್ತೇಃ ॥ ಛಲಾರಿ–ಸ್ಮೃತಿ. ಸಾಗರ ] . ಉದಾ : ಅಸ್ಮತ್ ಪಿತರಂ [ ಸಂಬಂಧ ] , .................. ಶರ್ಮಾಣಂ [ ಹೆಸರು ] , ............................ ಗೋತ್ರಂ [ ಗೋತ್ರ ] , ವಸು ರೂಪಂ [ ರೂಪ ] , ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ, ಸ್ವಧಾ [ ಪಿತೃಗಳನ್ನು ಉದ್ದೇಶಿಸಿ ನೀಡುವ ಶಬ್ದ " ಸ್ವಧಾ ", ಹೀಗೆಯೇ " ಸ್ವಾಹಾ " ಎಂಬುದು ದೇವತೆಗಳನ್ನು ಉದ್ದೇಶಿಸಿ ನೀಡುವ ಶಬ್ದ ] ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ಎಂಬುವಾಗಿ ಮೂರುಬಾರಿ ನೀಡಬೇಕು.

## ೧೫. ಶ್ರಾದ್ಧದ ಮುಖ್ಯನಿಯಾಮಕ ವಿಷ್ಣು

ಶ್ರೇಷ್ಠನಾದ ವಾಸುದೇವ ಪ್ರಪಿತಾಮಹ ಅಂತರ್ಯಾಮಿಯಾಗಿಯೂ, ಪ್ರಭುವಾದ ಸಂಕರ್ಷಣ ಪಿತಾಮಹಾಂತರ್ಯಾಮಿಯಾಗಿಯೂ, ಅಪರಾಜಿತನಾದ ಪ್ರದ್ಯುಮ್ನ ಪಿತ್ರಂತರ್ಯಾಮಿಯಾಗಿ ಇರುತ್ತಾನೆಂದು ತಿಳಿಯಬೇಕು. ಪಿತ್ರಂತರ್ಗತ ರೂಪಗಳು ಕ್ರಮವಾಗಿ ತಂದೆಯಲ್ಲಿ ವಸುರೂಪ, ತದಂತರ್ಯಾಮಿ ಪ್ರದ್ಯುಮ್ನ, ತಂದೆಯತಂದೆಯಲ್ಲಿ [ ತಾತ ] ರುದ್ರರೂಪ, ತದಂತರ್ಯಾಮಿ ಸಂಕರ್ಷಣ ಹಾಗೂ ಮುತ್ತಾತನಲ್ಲಿ ಆದಿತ್ಯರೂಪ ತದಂತರ್ಯಾಮಿ ವಾಸುದೇವ [ ಪಿತುಃ ಪೈತಾಮಹಃ ಪಿಂಡೋ ವಾಸುದೇವ ಪ್ರಕೀರ್ತಿತಃ । ಪೈತಾಮಹಶ್ಚ ನಿರ್ದಿಷ್ಟಸ್ತಥಾ

ಸಂಕರ್ಷಣಃ ಪ್ರಭುಃ ॥೨೦॥ ಪಿತೃಪಿಂಡಶ್ಚ ವಿಜ್ಞೇಯಃ ಪ್ರದ್ಯುಮ್ನಶ್ಚಾಪರಾಜಿತಃ। ಆತ್ಮಾಽನಿರುದ್ಧೋ ವಿಜ್ಞೇಯಃ ಪಿಂಡನಿರ್ವಪಣಂ ಬುಧೈಃ ॥೨೧॥ ಶ್ರಾದ್ಧಂ ಕರ್ತುಂ ಕಥಂ ಶಕ್ಯಂ ವಿನಾ ವೈಷ್ಣವತೇಜಸಾ ॥೨೨॥] ಎಂದು ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡ ಅಧ್ಯಾಯ ೧೪೩ರಲ್ಲಿದೆ. ಕಲಾ ಕಾಷ್ಠ ನಿಮೇಷಾದಿ ಕಾಲಜ್ಞಾನಾತ್ಮರೂಪಿಣೇ । ಧ್ಯೇಯಾಯ ವಿಷ್ಣುರೂಪಾಯ ಪರಮಾಕ್ಷರ ರೂಪಿಣೇ ॥ ೧೭ ॥ ಬಿಭರ್ತಿಯಸ್ಸುರಗಣಾನಾಪ್ಯಾ ಯೇಂದುಂ ಸ್ವರಶ್ಮಿಭಿಃ । ಸ್ವಧಾಮೃತೇನ ಚ ಪಿತೃಂಸ್ತಸ್ಮೈ ತೃಪ್ತಾತ್ಮನೇ ನಮಃ ॥ ಪಿತೃಗಳಿಗೆ ಸ್ವಧಾಮೃತದಿಂದ ಪರಮಾಕ್ಷರರೂಪನಾದ ವಿಷ್ಣು ತೃಪ್ತಿಯನ್ನುಂಟುಮಾಡುತ್ತಾನೆ ಎನ್ನುವುದರಿಂದ ಶ್ರಾದ್ಧದ ಮುಖ್ಯ ನಿಯಾಮಕ ವಿಷ್ಣುವೆಂಬುದು ವಿಷ್ಣುಪುರಾಣ ತೃತೀಯಾಂಶ, ಅಧ್ಯಾಯ ೫ರಿಂದಲೂ ತಿಳಿದುಬರುತ್ತದೆ.

## ೧೬. ಋಗ್ವೇದೀ ಹಾಗೂ ಯಜುರ್ವೇದೀಯ ನಾಮ, ಗೋತ್ರ ಕ್ರಮ

ಪಿತೃತರ್ಪಣದಲ್ಲಿ ಋಗ್ವೇದಿಗಳು ಮೊದಲು ಹೆಸರು, ನಂತರ ಗೋತ್ರ, ನಂತರ ರೂಪಸಹಿತವಾಗಿ [ ಬಹ್ವೃಚಾನಾಂ ಗೋತ್ರೋಚ್ಚಾರಃ ಪೂರ್ವಂ ತತೋ ನಾಮೋಚ್ಚಾರಸ್ತಸ್ಯ ಗೋತ್ರಂ ನಾಮ ಗೃಹೀತ್ವೇತಿ ತದ್ಗೃಹ್ಯ ಉಕ್ತತ್ವಾತ್ ] ತನ್ನ ತಂದೆಯಿಂದಾರಂಭಿಸಿ ತರ್ಪಣಕ್ಕೆ ಅರ್ಹರಾದವರ ಆತ್ಮಬಂಧುಗಳಿಗೆ ನೀಡಬೇಕು. ಯಜುರ್ವೇದಿಗಳು ಮೊದಲು ಗೋತ್ರ, ನಂತರ ಹೆಸರು, ನಂತರ ರೂಪಸಹಿತವಾಗಿ ತರ್ಪಣ ನೀಡಬೇಕು. ಪಿತೃತರ್ಪಣದಲ್ಲಿ ಹಾಗೂ ಪಿಂಡದಾನದಲ್ಲಿ ಹೆಸರು ಗೋತ್ರ ತಿಳಿಯದೆ ಸಂಬಂಧಮಾತ್ರ ತಿಳಿದಿದ್ದ ಪಕ್ಷದಲ್ಲಿ ಹೆಸರಿನ ಸ್ಥಾನದಲ್ಲಿ ಗಂಡಸರಿಗೆ "ಯಜ್ಞಪ್ಪ" ಎಂದೂ, ಹೆಂಗಸರಿಗೆ "ಯಜ್ಞಮ್ಮ" ಎಂದೂ ಗೋತ್ರಸ್ಥಾನದಲ್ಲಿ "ಕಾಶ್ಯಪ" ಗೋತ್ರವೆಂದೂ ಹೇಳಬೇಕು. ತೌಳವ ಸಂಪ್ರದಾಯದಲ್ಲಿ ಹೆಸರು, ಗೋತ್ರದ ಸ್ಥಾನದಲ್ಲಿ "ವಿಷ್ಣು" ವೆಂದುಚ್ಚರಿಸುತ್ತಾರೆ.

## ೧೭. ರಾತ್ರಿಯಲ್ಲಿ ತಿಲತರ್ಪಣ ನಿಷೇಧ

ಪ್ರಮಾದದಿಂದ ದಿನಕೃತ್ಯಗಳನ್ನು [ ಸ್ನಾನ, ಆಹ್ನೀಕ, ಪೂಜಾ, ಬ್ರಹ್ಮಯಜ್ಞಗಳನ್ನು ] ಮಾಡಲು ಆಗದಿದ್ದರೆ ರಾತ್ರಿಯ ಪ್ರಥಮಯಾಮ ಪರ್ಯಂತ [ಸುಮಾರು ರಾತ್ರಿ ೯ ಘಂಟೆಯವರೆಗೆ ] ದಿನಕೃತ್ಯಗಳನ್ನು ಮಾಡಲು ಬರುತ್ತದೆ. ಸಂಧ್ಯಾನಂತರ

ಬ್ರಹ್ಮಯಜ್ಞ ಆಚರಿಸಬೇಕು. ರಾತ್ರಿಯಲ್ಲಿ ತಿಲತರ್ಪಣ ನಿಷೇಧ, ಆದ್ದರಿಂದ ತಿಲತರ್ಪಣ ವರ್ಜಿಸಬೇಕು. ಎಂದು ವರಾಹ ಪುರಾಣ ಚಾತುರ್ಮಾಸ ಮಾಹಾತ್ಮೆ ಅಧ್ಯಾಯ ೭ ರಲ್ಲಿ ಹೇಳಿದೆ. [ ದಿವೋದಿತಾನಿ ಕರ್ಮಾಣಿ ಪ್ರಮಾದಾದಕೃತಾನಿ ಚೇತ್ । ಶರ್ವರ್ಯಾಃ ಪ್ರಥಮೇ ಯಾಮೇ ದಿವಾವತ್‌ಕರ್ಮ ಕಾರಯೇತ್ ॥ ಬ್ರಹ್ಮಯಜ್ಞಂ ಚ ಸೌರಂ ಚ ವರ್ಜಯೇತ್ತಿಲತರ್ಪಣಂ। ] ಏಕಾದಶಿಯಂದು ಬ್ರಹ್ಮಯಜ್ಞಾಂಗ ತಿಲತರ್ಪಣವಿಲ್ಲ ಪ್ರತ್ಯಾಮ್ನಾಯ ಪವಮಾನಸೂಕ್ತ ಪಾರಾಯಣ ಕ್ರಮವುಂಟು. ಅಷ್ಟಮಹಾಮಂತ್ರ ಜಪಾಂಗ ಜಲತರ್ಪಣವುಂಟು. ರಾಘವೇಂದ್ರಾಷ್ಟಾಕ್ಷರ ಇತ್ಯಾದಿ ಯತಿಗಳ ಮಂತ್ರಜಪವುಂಟು, ಮಂತ್ರಜಪಾಂಗ ತರ್ಪಣವಿಲ್ಲ. ದ್ವಾದಶಿಯಂದು ತರ್ಪಣ ನೀಡಬೇಕು. ಅಂದು ಹರಿಯನ್ನು ಹೊರತುಪಡಿಸಿ ಅನ್ಯರಿಗೆ ತರ್ಪಣ ನೀಡಲು ಬರುವುದಿಲ್ಲ. [ಸಂಧ್ಯಾರ್ಘ್ಯ ಎಲ್ಲಾ ಸಂದರ್ಭಗಳಲ್ಲೂ ಕಡ್ಡಾಯ] . ಗ್ರಹಣ ನಿಮಿತ್ತ ತಿಲ ತರ್ಪಣವನ್ನು ರಾತ್ರಿಯಾದರೂ ನೀಡಲೇಬೇಕು.

### ೧೮. ನಿರ್ಮಾಲ್ಯತೀರ್ಥದಿಂದಲೇ ತರ್ಪಣ

ಸಾಲಗ್ರಾಮ ಸಂಪರ್ಕದಿಂದ ಜಲವು ತೀರ್ಥವೆನ್ನಿಸಿಕೊಳ್ಳುವುದರಿಂದ, ತರ್ಪಣಕ್ಕೆ ನಿರ್ಮಾಲ್ಯತೀರ್ಥವನ್ನೇ ಉಪಯೋಗಿಸಬೇಕು. ತರ್ಪಣಕ್ಕಾಗಿರುವ ಜಲಕ್ಕೆ ತೀರ್ಥ ಸೇರಿಸಬೇಕಲ್ಲದೆ ತೀರ್ಥಕ್ಕೆ ಜಲಸೇರಿಸಿದರೆ ಅದು ಜಲವೇ ಆಗುತ್ತದೆ. ಆಕಸ್ಮಾತ್ ತೀರ್ಥ ನೆಲಕ್ಕೆ ಬಿದ್ದರೆ ಅದಕ್ಕೆ ಸ್ವಲ್ಪ ಜಲ ಹಾಕಿ ತೀರ್ಥವನ್ನು ಜಲವಾಗಿ ಪರಿವರ್ತಿಸುವ ಸಂಪ್ರದಾಯವಿದೆ. [ ತೀರ್ಥವನ್ನು ಸೇವಿಸುವುದರಿಂದ ಎಷ್ಟು ಪುಣ್ಯವೋ ಅದನ್ನು ನೆಲಕ್ಕೆ ಬೀಳಿಸುವುದರಿಂದ ಏಳುಪಟ್ಟು ಪಾಪ ಬರುತ್ತದೆ. ] ತರ್ಪಣಕ್ಕೆ ಉಪಯೋಗಿಸುವ ಎಳ್ಳನ್ನು ದೇವರಿಗೆ ನಿವೇದಿಸಿರಬೇಕು. [ ಶಾಲಗ್ರಾಮ ಶಿಲಾ ತೀರ್ಥಯುಕ್ತೇನೈವ ಜಲೇನ ತು । ದೇವಾದಿತರ್ಪಣಂ ಕುರ್ಯಾದನ್ಯಥಾ ನಿಷ್ಫಲಂ ಭವೇತ್ ॥ ವಿನಾ ತೀರ್ಥೇನ ಯಃ ಕುರ್ಯಾತ್ತರ್ಪಣಂ ಪಿತೃದೇವತಾಃ । ರೇತೋಮೂತ್ರಪುರೀಷಾಂಶ್ಚ ಸ ಪಿತೃಭ್ಯಃ ಪ್ರಯಚ್ಛತಿ ॥ ಶಾಲಗ್ರಾಮಶಿಲಾ ತೋಯೈಸ್ತರ್ಪಯೇತ್‌ಪಿತೃದೇವತಾಃ । ಅಮೃತೇನ ಸಮಂ ಭೂತ್ವಾ ನಿತ್ಯತೃಪ್ತಾ ನ ಸಂಶಯಃ ॥ – ಛಲಾರಿ ಸ್ಮೃತ್ಯರ್ಥ ಸಾಗರ/ ಆಹ್ನಿಕ ತರಂಗ ]

## ೧೯. ತಿಲತರ್ಪಣ ಕೆಲವು ವಿಶೇಷ ನಿಯಮಗಳು

ಬ್ರಹ್ಮಯಜ್ಞಾಂಗ ತರ್ಪಣವು ನಿತ್ಯ ತರ್ಪಣ, ಇದರಂತೆಯೇ ನಿತ್ಯ ತೀರ್ಥಲಾಭವಿದ್ದರೇ ಅಂದರೆ ನದೀ ಉತ್ತಮ ತಟಾಕಾದಿಗಳಿದ್ದರೆ ಅಲ್ಲಿಯೂ ಸ್ನಾನಾಂಗ ತರ್ಪಣವು ನಿತ್ಯ. ಈ ರೀತಿಯ ನಿತ್ಯತರ್ಪಣದಲ್ಲಿ ನಿಷಿದ್ಧ ದಿನಗಳನ್ನು ಈ ರೀತಿ ಹೇಳಲಾಗಿದೆ, ಪ್ರತಿದಿನವೂ ಬ್ರಹ್ಮಯಜ್ಞವನ್ನು ಮಾಡಬೇಕು. ಇದರಂತೆಯೇ ನಿಷಿದ್ಧದಿನವನ್ನು ಹೊರತುಪಡಿಸಿ ಪಿತೃಗಳನ್ನುದ್ದೇಶಿಸಿ ತಿಲತರ್ಪಣವನ್ನು ಮಾಡಬೇಕು. ಭಾನುವಾರ, ಮಂಗಳವಾರ, ಶುಕ್ರವಾರದಂದು, ನಂದಾತಿಥಿ ಅಂದರೆ ಶುಕ್ಲ ಹಾಗೂ ಕೃಷ್ಣ ಪಕ್ಷಗಳ ಪ್ರತಿಪತ್, ಷಷ್ಠೀ ಹಾಗೂ ಏಕಾದಶೀ ತಿಥಿಗಳು, ಸಪ್ತಮೀ ಮತ್ತು ತ್ರಯೋದಶಿಯಂದು, ಮಖಾ, ಭರಣೀ, ಕೃತ್ತಿಕಾ ನಕ್ಷತ್ರಗಳಂದು, ಉತ್ತರಾಯಣ ಹಾಗೂ ದಕ್ಷಿಣಾಯನದಂದು, ಕೃತ, ತ್ರೇತಾ, ದ್ವಾಪರ, ಕಲಿಯುಗಾದಿ ದಿನಗಳಂದು ಗೃಹದಲ್ಲಿ, ಮರಣದಿನದಂದು, ಜನನದಿನದಂದು, ಸಂಧ್ಯಾಕಾಲದಲ್ಲಿ ಹಾಗೂ ರಾತ್ರಿಯ ಸಮಯದಲ್ಲಿ – ಮೃತ್ತಿಕಾಸ್ನಾನವನ್ನೂ ತಿಲತರ್ಪಣ ಪಿಂಡದಾನವನ್ನೂ ಮಾಡಬಾರದು. ಯಾಕೆಂದರೆ ನಿಷಿದ್ಧ ದಿನ, ವಾರ, ನಕ್ಷತ್ರಗಳಂದು ಹಾಗೂ ನಿಷಿದ್ಧ ತಿಥಿಗಳಂದು ತಿಲತರ್ಪಣವನ್ನು ಮಾಡಿದರೆ ಅಂತಹ ತರ್ಪಣವು ರಕ್ತದಿಂದ ನೀಡಿದಂತಹ ತರ್ಪಣಕ್ಕೆ ಸಮಾನವಾಗುತ್ತದೆ ಎಂದು ತರ್ಪಣ ನಿಷಿದ್ಧ ದಿನಗಳನ್ನು ತಿಳಿಸಿ ಇದಕ್ಕೆ ಅಪವಾದವಾಗಿ ತೀರ್ಥಯಾತ್ರಾನಿಮಿತ್ತದಿಂದ ತೀರ್ಥಲಾಭವಾದಾಗ, ತಿಥಿ ವಿಶೇಷಗಳಿದ್ದಾಗ, ಪ್ರೇತಕಾರ್ಯದಲ್ಲಿ, ಮಹಾಲಯದಲ್ಲಿ ವ್ಯತೀಪಾತ ಹಾಗೂ ವೈಧೃತಿಯೋಗವಿದ್ದಾಗ, ಮೇಷಾದಿ ಸಂಕ್ರಾಂತಿಗಳಂದು ನಿಷಿದ್ಧದಿನವಿದ್ದರೂ ತಿಲದಿಂದ ಕೂಡಿರುವ ತರ್ಪಣವನ್ನು ನೀಡಬೇಕೆಂದಿದೆ. ಇದರಿಂದ ಮೇಲಿನ ಅಪವಾದ ನಿವಾರಣೆಯಾಗುತ್ತದೆ. ಈ ರೀತಿಕೊಡಲ್ಪಟ್ಟ ತರ್ಪಣವು ಪ್ರಾತಃ ಕಾಲದಲ್ಲಿ ಕೊಟ್ಟರೆ ಅಮೃತ ಪ್ರಾಯವಾಗುತ್ತದೆ, ಮಧ್ಯಾಹ್ನದಲ್ಲಿ ಹಾಲಿಗೆ ಸಮಾನವಾಗುತ್ತದೆ, ಅಪರಾಹ್ಣದಲ್ಲಿ ನೀರಿನಿಂದ ಕೊಡಲ್ಪಟ್ಟಂತೆ ಆಗುತ್ತದೆ. ಸಾಯಂಕಾಲದಲ್ಲಿ ಕೊಟ್ಟಂತಹ ತರ್ಪಣ ರಕ್ತಕ್ಕೆ ಸಮಾನವಾಗುತ್ತವೆ. ಇದರಿಂದ ಮೇಲೆ ಹೇಳಲ್ಪಟ್ಟ ಸಂಧ್ಯೆಯು ಸಾಯಂ ಸಂಧ್ಯೆಯ ಕಾಲವೆಂದು ತಿಳಿದುಬರುತ್ತದೆ. [ ಬ್ರಹ್ಮಯಜ್ಞಂ ಪ್ರಕುರ್ವೀತ ಪ್ರತ್ಯಹಂ ತಿಲತರ್ಪಣಂ । ಪಿತ್ರ್ಯಾನುದ್ದಿಶ್ಯ ಪಿತ್ರಾದೀನ್ ನಿಷಿದ್ಧ ದಿವಸಂ ವಿನಾ ॥ ಭಾನುವಾರೇ ಭೌಮವಾರೇ ನಂದಾ ಭೃಗುಮಘಾಸು ಚ । ತ್ರಯೋದಶ್ಯಾಂ ತು ಸಪ್ತಮ್ಯಾಂ ಭರಣ್ಯಾಂ ಕೃತ್ತಿಕಾಸು

ಚ ॥ ಅಯನದ್ವಿತಯೇ ಚೈವ ಚತುರ್ಷ್ವಪಿ ಯುಗಾದಿಷು । ಗೃಹೇ ಮೃತಾಹೇ ಜನ್ಮರ್ಕ್ಷೇ ಸಂಧ್ಯಯೋಶ್ಚ ತಥಾ ನಿಶಿ ॥ ಪಿಂಡದಾನಂ ಮೃದಾಸ್ನಾನಂ ನ ಕುರ್ಯಾತ್ತಿಲತರ್ಪಣಾಂ । ನಿಷಿದ್ಧ ದಿವಸೇ ವಾರೇ ನಕ್ಷತ್ರೇ ಚ ತಥಾ ತಿಥೌ ॥ ಯಸ್ತಿಲೈಸ್ತರ್ಪಣಂ ಕುರ್ಯಾತ್ ತಜ್ಜಲಂ ರುಧಿರಂ ಭವೇತ್ । ತೀರ್ಥೇ ತಿರ್ಥಿವಿಶೇಷೇ ಚ ಪ್ರೇತಕಾರ್ಯೇ ತಥೈವ ಚ ॥ ಪ್ರೇತಪಕ್ಷೇ ವ್ಯತೀಪಾತೇ ಸಂಕ್ರಾಂತೌ ವೈಧೃತಾವಪಿ । ನಿಷಿದ್ಧೇಽಪಿ ದಿನೇ ಕುರ್ಯಾತ್ ತಿಲಯುಕ್ತಂ ತು ತರ್ಪಣಾಂ ॥ ಅಮೃತಂ ತು ಭವೇತ್ ಪ್ರಾತಃ ಮಧ್ಯಾಹ್ನೇ ಕ್ಷೀರವದ್ಭವೇತ್ । ಅಪರಾಹ್ಣೇ ಭವೇತ್ತೋಯಂ ಸಾಯಾಹ್ನೇ ರುಧಿರಂ ಭವೇತ್ ॥ ಶ್ರಾದ್ಧಾಂಗ ತರ್ಪಣಾಂ ಪ್ರಂತೇ ಮಧ್ಯಾಹ್ನೇ ನಿತ್ಯತರ್ಪಣಾಂ । ಸಂಕೋಚೇ ತೀರ್ಥಾಲಾಭೇ ವಾ ಪ್ರಾತರಪ್ಯಾಚರೇತ್ತು ತತ್ ॥ – ವರಾಹ ಪುರಾಣ ಚಾತುರ್ಮಾಸ್ಯ ಮಹಾತ್ಮೇ/ ಅಧ್ಯಾಯ ಏಳು/ ಶ್ಲೋಕ ೭೪ ರಿಂದ ೮೧ ರವರೆಗೆ. ] ಕೆಲವು ಸಂದರ್ಭದಲ್ಲಿ ಗೃಹದಲ್ಲಿ ತಿಲತರ್ಪಣ ಮಾಡಬಾರದೆಂದು ನಿಷೇಧಿಸುವ ವಚನಗಳು ಇವೆ. ಇದರಿಂದ ಕೆಲವರು ತುಳಸೀ ಕಟ್ಟೆಯ ಸಮೀಪದಲ್ಲಿ [ ತುಳಸೀ ವೃಂದಾವನದಲ್ಲಿ ಸಕಲತೀರ್ಥ ಸಾನ್ನಿಧ್ಯ ವಿರುವುದರಿಂದ ] ಹಾಗೂ ಕೊಟ್ಟಿಗೆಯಲ್ಲಿ [ ಗೋವಲ್ಲಿ ಸಕಲದೇವತಾ ಸಾನ್ನಿಧ್ಯ ವಿರುವುದರಿಂದ ] ಮನೆಯಿಂದ ಹೊರಗೆ ತಿಲತರ್ಪಣನೀಡುವ ಸಂಪ್ರದಾಯವಿದೆ. ತಿಲತರ್ಪಣಕ್ಕೆ ನಿಷೇಧಿಸಿದ ಕೆಲವು ತಿಥಿಗಳು, ವಿಶೇಷ ತೀರ್ಥಗಳು, ಹಾಗೂ ಗಂಗೆಯಲ್ಲಿ ಇದರಂತೆಯೇ ಮಹಾಲಯದಲ್ಲಿ, ನಿಷಿದ್ಧ ತಿಥಿ, ವಾರ, ನಕ್ಷತ್ರಗಳಿದ್ದರೂ ತಿಲತರ್ಪಣ ನೀಡಬೇಕೆಂದು ಸ್ಕಾಂಧಪುರಾಣದ ವಚನವಿದೆ. [ ತಿಥಿ ತೀರ್ಥ ವಿಶೇಷೇ ಚ ಗಂಗಾಯಾಂ ಪ್ರೇತಪಕ್ಷಕೇ । ನಿಷಿದ್ಧೇಽಪಿ ದಿನೇ ಕುರ್ಯಾತ್ತರ್ಪಣಾಂ ತಿಲಮಿಶ್ರಿತಂ ॥ ಇತಿ ಸ್ಕಾಂಧೇ ॥ ], ಇದರಂತೆ ಗೋಭಿಲರೂ ಕೂಡ–ಸಂಕ್ರಾಂತಿ ಆದಿ ನಿಮಿತ್ತದಿಂದ ಪುಣ್ಯಸ್ನಾನ ಮಾಡುವ ಸಂದರ್ಭದಲ್ಲಿಯೂ, ತಿಥಿ, ವಾರ, ನಿಷೇಧವಿದ್ದರೂ [ ತಿಲತರ್ಪಣಕ್ಕೆ ] ಸ್ನಾನಾಂಗ ತರ್ಪಣದಲ್ಲಿ ತಿಲವನ್ನು ಬಳಸಬೇಕೆಂದಿದ್ದಾರೆ. ಗೋಭಿಲಃ – ಸಂಕ್ರಾಂತ್ಯಾದಿ ನಿಮಿತ್ತೇಷು ಸ್ನಾನಾಂಗೇ ತರ್ಪಣೇ ತಥಾ । ತಿಥಿವಾರ ನಿಷೇಧೇಽಪಿ ತಿಲೈಸ್ತರ್ಪಣಮಾಚರೇತ್ ॥ ಇತಿ ॥ ಉತ್ತರಾಯಣ, ದಕ್ಷಿಣಾಯನದಲ್ಲಿ, ವಿಷುವತ್ ಪುಣ್ಯಕಾಲವಲ್ಲಿ, ಇದರಂತೆಯೇ ಇತರ ಸಂಕ್ರಾಂತಿಗಳಲ್ಲಿ, ಸೂರ್ಯ, ಚಂದ್ರಗ್ರಹಣದಲ್ಲಿ, ಉಪಾಕರ್ಮ ಹಾಗೂ ವೃಷೋತ್ಸರ್ಗದಲ್ಲಿ, ಯುಗಾದಿಗಳಲ್ಲಿ, ಮಾತಾಪಿತೃಗಳ ಮೃತದಿವಸಗಳಲ್ಲಿ ನಿಷೇಧವಿದ್ದ ತಿಥಿ, ನಕ್ಷತ್ರ, ವಾರಾದಿಗಳಿದ್ದರೂ ತಿಲತರ್ಪಣ ಮಾಡಬೇಕೆಂದಿದೆ .

## ೩. ತರ್ಪಣ ಕಾಲಗಳು




ನಿತ್ಯಂನೈಮಿತ್ತಿಕಂ ಕಾಮ್ಯಂ ತ್ರಿವಿಧಂ ಸ್ನಾನಮಿಷ್ಯತೇ । ತರ್ಪಣಂ ತು ಭವೇತ್ತಸ್ಯ ಅಂಗತ್ವೇನ ವ್ಯವಸ್ಥಿತಂ ॥ [ ಬ್ರಹ್ಮಾಂಡ ಪುರಾಣ ] .

ನಿತ್ಯಸ್ನಾನ, ನೈಮಿತ್ತಿಕಸ್ನಾನ, ಕಾಮ್ಯಸ್ನಾನ ಎಂದು ಸ್ನಾನ ತ್ರಿವಿಧ .

ಈ ಸ್ನಾನಾಂಗವಾಗಿ ನಿತ್ಯ,ನೈಮಿತ್ತಿಕ, ಕಾಮ್ಯಎಂದು ತರ್ಪಣವು ತ್ರಿವಿಧ .

## ೪. ತರ್ಪಣದ ಸಾಂಪ್ರದಾಯಿಕತೆ

ತರ್ಪಣದ ಬಗ್ಗೆ ಶ್ರೀಮದಾನಂದತೀರ್ಥ ಭಗವತ್ಪಾದರು ಸದಾಚಾರಸ್ಮೃತಿಯಲ್ಲಿ ಮಂತ್ರತಃ ಪರಿವೃತ್ಯಾಥ ಸಮಾಚಮ್ಯ ಸುರಾದಿಕಾನ್ । ತರ್ಪಯಿತ್ವಾ ನಿಪೀಡ್ಯಾಥ ವಾಸೋ ವಿಸ್ಮೃತ್ಯ ಚಾಂಜಸಾ ॥೬॥ ಎಂದಿದ್ದಾರೆ. ಇಲ್ಲಿರುವ ತರ್ಪಸಿದಾದ ಮೇಲೆ [ ತರ್ಪಯಿತ್ವಾ] ಎಂಬ ಶಬ್ದದಿಂದ, ಸಂಧ್ಯಾಂಗ ತರ್ಪಣ ಹಾಗೂ ಬ್ರಹ್ಮಯಜ್ಞಾಂಗ ತರ್ಪಣ ಎರಡನ್ನು ಗ್ರಹಿಸಬೇಕು. ಆಚಾರ್ಯರ ಅನುಜರಾದ ಶ್ರೀವಿಷ್ಣುತೀರ್ಥರು ಸನ್ಯಾಸ ಪದ್ಧತಿ / ದ್ವಿತೀಯ ಅಧ್ಯಾಯದಲ್ಲಿ ಸ್ನಾನಾಂಗ ತರ್ಪಣ ವಿಚಾರವಾಗಿ ಅಘಮರ್ಷಣಾನಂತರ ತರ್ಪಯೇದ್ದೇವತಾಸ್ತತಃ ಋಷೀನ್ ಪಿತೃನ್ ॥೧೩॥ ಎಂದು ಹೇಳಿದ್ದಾರೆ. ಈ ಗುರುಗಳ ಪಂಕ್ತಿಯನ್ನೇ ಅನುಸರಿಸಿ ಶ್ರೀಮನ್ನಾರಾಯಣ ಪಂಡಿತಾಚಾರ್ಯರು ತಮ್ಮ ಯೋಗದೀಪಿಕೆ ದ್ವಿತೀಯ ಅಧ್ಯಾಯದಲ್ಲಿ ಆಗಚ್ಛಂತ್ವಿತಿ ಮಂತ್ರೇಣ ಜಲಂ ತ್ರಿರಪಸವ್ಯತಃ ॥ ೩೨॥ ಪಿತೃಭ್ಯಃ ಪ್ರಕ್ಷಿಪೇದ್ವಿಪ್ರಃ ಪ್ರೀಯತಾಮಿತಿ ॥೩೩॥ ಎಂದು ಸ್ನಾನಾಂಗ ತರ್ಪಣ ಹಾಗೂ ಕುರ್ಯಾನ್ಮಾಧ್ಯಾಹ್ನಿಕ ಕ್ರಿಯಾಮ್ । ತರ್ಪಣಂ ಚೇಶದೇವಾದೇರ್ಗೃಹೀ ಸ್ವಾಧ್ಯಾಯ ತರ್ಪಣಮ್ ॥೯೨ ॥ ಎಂದು ಬ್ರಹ್ಮಯಜ್ಞಾಂಗ ತರ್ಪಣಾಗಳನ್ನು ತಿಳಿಸಿದ್ದಾರೆ.

ಶ್ರೀಮದಾನಂದತೀರ್ಥ ಭಗವತ್ಪಾದರು ತಮ್ಮ ಶ್ರೀಮನ್ಮಹಾಭಾರತ ತಾತ್ಪರ್ಯನಿರ್ಣಯ ೨೮ನೇ ಅಧ್ಯಾಯ/ ಶ್ಲೋಕ ೨೩೭ರ ಸ್ತ್ರೀ ಪರ್ವ ಕಥಾ ಸಂಗ್ರಹದಲ್ಲಿ ತತೋ ದದತ್ಸು ಪಾನೀಯಂ ಗಂಗಾಯಾಂ ಸ್ವಜನಸ್ಯ ತು ॥ ಸ್ವಜನರ ಸಂಸ್ಕಾರಾನಂತರ ಪಾಂಡವರು ಗಂಗಾನದಿಯಲ್ಲಿ ತಿಲೋದಕವನ್ನು ನೀಡಿದರು ಎಂದು ತಿಳಿಸಿದ್ದಾರೆ.

ಈಗ ಆಚರಣೆಯಲ್ಲಿರುವ ದೇವ, ಋಷಿ, ಪಿತೃ ತರ್ಪಣ ಕ್ರಮವು ಶ್ರುತಿ ಸ್ಮೃತಿ ಮತ್ತು ಅನೇಕ ಗೃಹ್ಯ ಸೂತ್ರಗಳಲ್ಲಿ ಹೇಳಲ್ಪಟ್ಟಿರುವ ಕ್ರಮ ಮತ್ತು ಪುರಾಣೋಕ್ತ ಕ್ರಮವನ್ನು ಆಧರಿಸಿದೆ. ಋಗ್ವೇದಿಗಳು ಆಶ್ವಲಾಯನ ಸೂತ್ರ ಕ್ರಮದಂತೆ, ಯಜುರ್ವೇದಿಗಳು ಆಪಸ್ತಂಭ, ಬೋಧಾಯನ ಸೂತ್ರ ಕ್ರಮದಂತೆ, ಸಾಮವೇದಿಗಳು ದ್ರಾಹ್ಯಾಯಣ ಸೂತ್ರಕ್ರಮದಂತೆ ತರ್ಪಣ ಆಚರಿಸುತ್ತಾರೆ. ಸ್ನಾನಾಂಗ ತರ್ಪಣದಲ್ಲಿ ಹೆಚ್ಚು ವ್ಯತ್ಯಾಸವಿಲ್ಲ. ಆದರೆ ಬ್ರಹ್ಮಯಜ್ಞಾಂಗ ತರ್ಪಣದ ಕಾಲದ ವಿಚಾರದಲ್ಲಿ ಶಾಖಾ ಭೇದವಿದ್ದು, ತರ್ಪಣ ವಿಧಿಯಲ್ಲಿಯೂ ವ್ಯತ್ಯಾಸವಿದೆ, ಅವರವರ ಶಾಖೆಯಂತೆ ಆಚರಿಸಬೇಕಾದ್ದು ಸಾಮಾನ್ಯ ನಿಯಮ.

## ೫. ಗರುಡಪುರಾಣೋಕ್ತ ತರ್ಪಣ ಕ್ರಮ

ಗರುಡ ಪುರಾಣ ಆಚಾರಕಾಂಡದ ೨೧೭ನೇ ಅಧ್ಯಾಯದಲ್ಲಿ ದೇವ, ಋಷಿ, ಪಿತೃ ತರ್ಪಣದ ಕ್ರಮವನ್ನು ಹೇಳಿದ್ದಾರೆ. ಆದರ ಮೂಲವನ್ನು ಮಾತ್ರ ಇಲ್ಲಿ ಕೊಡಲಾಗಿದೆ.

|| ಶ್ರೀಗರುಡಮಹಾಪುರಾಣೇ ಆಚಾರಕಾಂಡೇ ಸಪ್ತಾಧಿಕ
ದ್ವಿಶತತಮೋಽಧ್ಯಾಯಃ ||

ಬ್ರಹ್ಮೋವಾಚ – ತರ್ಪಣಂ ಸಂಪ್ರವಕ್ಷ್ಯಾಮಿ ದೇವಾದಿಪಿತೃತುಷ್ಟಿದಮ್ । ಓಂ ಮೋದಾಸ್ತೃಪ್ಯಂತಾಂ, ಓಂಪ್ರಮೋದಾಸ್ತೃಪ್ಯಂತಾಂ, ಓಂ ಸುಮುಖಾಸ್ತೃಪ್ಯಂತಾಂ, ಓಂ ದುರ್ಮುಖಾಸ್ತೃಪ್ಯಂತಾಂ, ಓಂ ವಿಘ್ನಾಸ್ತೃಪ್ಯಂತಾಂ, ಓಂವಿಘ್ನಕರ್ತಾರಸ್ತೃಪ್ಯಂತಾಂ, ಓಂ ಛಂದಾಂಸಿತೃಪ್ಯಂತಾಂ , ಓಂ ವೇದಾಸ್ತೃಪ್ಯಂತಾಂ, ಓಂ ಓಷಧಯಸ್ತೃಪ್ಯಂತಾಂ, ಓಂ ಸನಾತನತೃಪ್ಯತಾಂ, ಓಂ ಇತರಾಚಾರ್ಯಾಸ್ತೃಪ್ಯಂತಾಂ, ಓಂ ಸಂವತ್ಸರಸ್ಸಾವಯವಾ ಸ್ತೃಪ್ಯಂತಾಂ, ಓಂ ದೇವಾಸ್ತೃಪ್ಯಂತಾಂ, ಓಂ ಅಪ್ಸರಸಸ್ತೃಪ್ಯಂತಾಂ, ಓಂ ದೇವಾಂಧಕಾಸ್ತೃಪ್ಯಂತಾಂ, ಓಂ ಸಾಗರಾಸ್ತೃಪ್ಯಂತಾಂ, ಓಂ ನಾಗಾಸ್ತೃಪ್ಯಂತಾಂ, ಓಂ ಪರ್ವತಾಸ್ತೃಪ್ಯಂತಾಂ, ಓಂ ಸರಿನ್ಮನುಷ್ಯಾ ಯಕ್ಷಾಸ್ತೃಪ್ಯಂತಾಂ, ಓಂ ರಕ್ಷಾಂಸಿ ತೃಪ್ಯಂತಾಂ, ಓಂ ಪಿಶಾಚಾಸ್ತೃಪ್ಯಂತಾಂ, ಓಂ ಸುಪರ್ಣಾಸ್ತೃಪ್ಯಂತಾಂ, ಓಂ ಭೂತಾನಿ ತೃಪ್ಯಂತಾಂ, ಓಂ ಭೂತಗ್ರಾಮಚತುರ್ವಿಧಾಸ್ತೃಪ್ಯಂತಾಂ, ಓಂ ದಕ್ಷಸ್ತೃಪ್ಯತಾಂ, ಓಂ ಪ್ರಚೇತಾಸ್ತೃಪ್ಯತಾಂ, ಓಂ ಮರೀಚಿಸ್ತೃಪ್ಯತಾಂ, ಓಂ ಅತ್ರಿಸ್ತೃಪ್ಯತಾಂ, ಓಂ ಅಂಗಿರಾಸ್ತೃಪ್ಯತಾಂ, ಓಂ ಪುಲಸ್ತ್ಯಸ್ತೃಪ್ಯತಾಂ, ಓಂ ಪುಲಹಸ್ತೃಪ್ಯತಾಂ, ಓಂ ಕ್ರತುಸ್ತೃಪ್ಯತಾಂ, ಓಂ ನಾರದಸ್ತೃಪ್ಯತಾಂ, ಓಂ ಭೃಗುಸ್ತೃಪ್ಯತಾಂ, ಓಂ ವಿಶ್ವಾಮಿತ್ರಸ್ತೃಪ್ಯತಾಂ, ಓಂ ಕಶ್ಯಪಸ್ತೃಪ್ಯತಾಂ, ಓಂ ಜಮದಗ್ನಿಸ್ತೃಪ್ಯತಾಂ, ಓಂ ವಸಿಷ್ಠಸ್ತೃಪ್ಯತಾಂ, ಓಂ ಸ್ವಾಯಂಭುವಸ್ತೃಪ್ಯತಾಂ,ಓಂ ಸ್ವಾರೋಚಿಷಸ್ತೃಪ್ಯತಾಂ, ಓಂ ತಾಪಸಸ್ತೃಪ್ಯತಾಂ, ಓಂ ರೈವತಸ್ತೃಪ್ಯತಾಂ, ಓಂ ಚಕ್ಷುಸ್ತೃಪ್ಯತಾಂ, ಓಂ ಮಹಾತೇಜಾಸ್ತೃಪ್ಯತಾಂ, ಓಂ ವೈವಸ್ವತಸ್ತೃಪ್ಯತಾಂ, ಓಂ ಧ್ರುವಸ್ತೃಪ್ಯತಾಂ, ಓಂ ಧವಸ್ತೃಪ್ಯತಾಂ, ಓಂ ಅನಿಲಸ್ತೃಪ್ಯತಾಂ, ಓಂ ಪ್ರಭಾಷಸ್ತೃಪ್ಯತಾಂ || ೧ ||

ನೀವೀತಿ – ಓಂ ಸನಕಸ್ತೃಪ್ಯತಾಂ, ಓಂ ಸನಂದನಸ್ತೃಪ್ಯತಾಂ, ಓಂ ಸನಾತನ ಸ್ತೃಪ್ಯತಾಂ, ಓಂ ಕಪಿಲಸ್ತೃಪ್ಯತಾಂ, ಓಂ ಆಸುರಿಸ್ತೃಪ್ಯತಾಂ, ಓಂ ವೋಢು ಸ್ತೃಪ್ಯತಾಂ, ಓಂ ಮನುಷ್ಯಾಣಾಂ ಕವ್ಯವಾಡಸ್ತೃಪ್ಯತಾಂ, ಓಂ ಸೋಮ ಸ್ತೃಪ್ಯತಾಂ, ಓಂ ಯಮಸ್ತೃಪ್ಯತಾಂ, ಓಂ ಆರ್ಯಮಾಸ್ತೃಪ್ಯತಾಂ ॥ ೨ ॥

ಪ್ರಾಚೀನಾವೀತೀ – ಓಂ ಅಗ್ನಿಷ್ವಾತ್ತಾಃ ಪಿತರಸ್ತೃಪ್ಯಂತಾಂ, ಓಂ ಸೋಮಸ್ಯಾಃ ಪಿತರಸ್ತೃಪ್ಯಂತಾಂ, ಓಂ ಬರ್ಹಿಷದಃ ಪಿತರಸ್ತೃಪ್ಯಂತಾಂ, ಯಮಾಯನಮಃ, ಧರ್ಮರಾಜಾಯನಮಃ, ಮೃತ್ಯವೇ ನಮಃ, ಅಂತಕಾಯನಮಃ, ವೈವಸ್ವತಾಯ ನಮಃ, ಕಾಲಾಯ ನಮಃ, ಸರ್ವಭೂತಕ್ಷಯಾಯ ನಮಃ, ಔದುಂಬರಾಯ ನಮಃ, ವಧ್ನಾಯ ನಮಃ, ನೀಲಾಯ ನಮಃ, ಪರಮೇಷ್ಠಿನೇ ನಮಃ, ವೃಕೋದರಾಯ ನಮಃ, ಚಿತ್ರಾಯ ನಮಃ, ಚಿತ್ರಗುಪ್ತಾಯ ನಮಃ ॥ ೩॥

ಬ್ರಹ್ಮಾದಿಸ್ತಂಬಪರ್ಯಂತಂ ಜಗತ್ತೃಪ್ಯತು ಪಿತೃಭ್ಯಃ ಸ್ವಧಾ ನಮಃ । ಪಿತಾಮಹೇಭ್ಯಃ ಸ್ವಧಾ ನಮಃ । ಆಯಾಂತು ನಃ ಪಿತರಃ ಸೌಮ್ಯಾಸಾ ಅಗ್ನಿಷ್ವಾತ್ತಾಃ ಪಥಿಭಿರ್ದೇವಯಾನೈರಸ್ಮಿನ್ ಯಜ್ಞೇ ಸ್ವಧಯಾ ಮದಂತೋಽಧಿಬ್ರುವಂತು ತೇ ಅವಂತ್ವಸ್ಮಾನ್ ॥ ೪ ॥
ನಮೋ ವಃ ಪಿತರೋ ಗೃಹಾನ್ನ ಪಿತರೋ ದತ್ತ । ನಮೋ ವ ಪಿತರೋ ವಧ್ಮೇ ತದ್ವಃ ಪಿತರೋ ವಾಸಃ । ಮಾತಾಮಹಾನಾಂ ತ್ರಿರಂಜಲಿಃ । ತತೋ ಮಾತಾದೀನಾಮ್ ॥ ೭॥

ಯೇ ಚಾಸ್ಮಾಕಂ ಕುಲೇ ಜಾತಾ ಅಪುತ್ರಾ ಗೋತ್ರಿಣೋ ಮೃತಾಃ ।
ತೇ ತೃಪ್ಯಂತು ಮಯಾ ದತ್ತಂ ವಸ್ತ್ರನಿಷ್ಪೀಡನೋದಕಮ್ ॥೮॥ [ ಈ ವಸ್ತ್ರನಿಷ್ಪೀಡನ ಮಂತ್ರ ವರಾಹಪುರಾಣ ಚಾತುರ್ಮಾಸ್ಯ ಮಹಾತ್ಮೆಯ ಅಧ್ಯಾಯ ೬/ ೪೨ ರಲ್ಲಿಯೂ ಉಕ್ತವಾಗಿದೆ ]

॥ ಇತಿ ಶ್ರೀಗಾರುಡೇ ಮಹಾಪುರಾಣೇ ಆಚಾರಕಾಂಡೇ ಸಪ್ತಾಧಿಕ ದ್ವಿಶತತಮೋಽಧ್ಯಾಯಃ ॥

# ನಿತ್ಯ ತರ್ಪಣ

ಸ್ನಾನಾಂಗ ತರ್ಪಣ. ಜಪಾಂಗ ತರ್ಪಣ, ಬ್ರಹ್ಮಯಜ್ಞಾಂಗ ತರ್ಪಣ ಎಂದು ನಿತ್ಯತರ್ಪಣವು ಮೂರು ವಿಧವಾಗಿದೆ.

## ೬. ಸ್ನಾನಾಂಗ ತರ್ಪಣ

ಸ್ನಾನಾಂಗ ತರ್ಪಣ ನದಿ ಅಥವಾ ಜಲಾಶಯದಲ್ಲಿ ಒದ್ದೆಯಲ್ಲಿಯೇ ನೀರಿನಿಂದ ನೀಡುವಂತಹುದು. ಗೃಹದಲ್ಲಿ ಸ್ನಾನ ಮಾಡುವಾಗ ಸ್ನಾನಾಂಗ ತರ್ಪಣವಿಲ್ಲ. ಇದು ದೇವ, ಋಷಿ, ಪಿತೃ ತರ್ಪಣ, ವಸ್ತ್ರನಿಷ್ಪೀಡನ, ಶಿಖೋದಕ, ಯಕ್ಷ್ಮತರ್ಪಣಗಳನ್ನು ಒಳಗೊಂಡಿದೆ. ಸಂಕಲ್ಪ, ಇಮಂ ಗಂಗೇ, ಯಾ ಪ್ರವತ, ಪವಮಾನ ಇತ್ಯಾದಿ ಸೂಕ್ತ ಪಠಣ, ಆಪೋಹಿಷ್ಠಾದಿ ಮಾರ್ಜನಮಂತ್ರ, ಋತಂ ಚ ವೆಂಬ ಅಘಮರ್ಷಣ ಮಂತ್ರ, ಮತ್ತು ದೇವಾದಿ ತರ್ಪಣ ಸೇರಿ ಸ್ನಾನವು ಐದು ಅಂಗಗಳಿಂದ ಕೂಡಿದೆ. [ ಸಂಕಲ್ಪಂ ಸೂಕ್ತಪಠನಂ ಮಾರ್ಜನಂ ಚಾಘಮರ್ಷಣಮ್ । **ದೇವಾದಿತರ್ಪಣಂ** ಪ್ರೋಕ್ತಂ ಸ್ನಾನಂ ಪಂಚಾಂಗ ಮುತ್ತಮಮ್ ॥ ] ವಸಿಷ್ಠರು ಸಹ – ದೈವ, ಪಿತೃ , ಮಂತ್ರ, ಜಪ, ದಾನಾದಿ ಕರ್ಮಗಳಲ್ಲಿ ಸ್ನಾನಾನಂತರವೇ ಅಧಿಕಾರಿಯಾಗುತ್ತಾನೆ ಎಂಬ ನಿಯಮ ತಿಳಿಸಿದ್ದಾರೆ. [ ವಸಿಷ್ಠಃ, – ಸ್ನಾತೋಽಧಿಕಾರೀ ಭವತಿ ದೈವೇ ಪಿತ್ರೇ ಚ ಕರ್ಮಣಿ । ಪವಿತ್ರಾಣಾಂ ತಥಾ ಜಪ್ಯೇ ದಾನೇ ಚ ವಿಧಿದರ್ಶಿತಃ ॥ ಇತಿ ॥ ಪವಿತ್ರಶಬ್ದೇನಾತ್ರ ಮಂತ್ರಾ ಉಚ್ಯತೆ । ಜಪಪದ ಸಾಹಚರ್ಯಾತ್ । ಪವಿತ್ರಂ ಪುನಾತೇರ್ಮಂತ್ರಃ ಪವಿತ್ರಮುಚ್ಯತ ಇತಿ ನಿರುಕ್ತಾಚ್ಚ । ] ದಕ್ಷರೂ ಕೂಡ ಸ್ನಾನವಿಲ್ಲದೇ ಜಪ ಹೋಮಾದಿ ಕರ್ಮಗಳನ್ನು ಆಚರಿಸಬಾರದೆಂದಿದ್ದಾರೆ. [ ದಕ್ಷೋಽಪಿ – ಅಸ್ನಾತ್ವಾ ನಾಽಚರೇತ್ ಕರ್ಮ ಜಪಹೋಮಾದಿ ಕಿಂಚನ ॥ ಇತಿ ॥ ] ದೈವ , ಪಿತ್ರಾದಿ ಕರ್ಮಗಳನ್ನು ಶಿರಸ್ನಾನ ಮಾಡಿಯೇ ಆಚರಿಸಬೇಕೆಂದು ಮಾರ್ಕಂಡೇಯ ಪುರಾಣದ ವಚನವಿದೆ. [ ಶಿರಃಸ್ನಾತಸ್ತು ಕುರ್ವೀತ ದೈವಂ ಪಿತ್ರ್ಯಮಥಾಪಿ ವಾ । ಇತಿ ಮಾರ್ಕಂಡೇಯ ಪುರಾಣೇ । ] ಈ ಎಲ್ಲಾ ಪ್ರಮಾಣಾನುಸಾರ ತರ್ಪಣವು ಸ್ನಾನಾಂಗವಾಗಿ ವಿಧಿಸಲ್ಪಟ್ಟಿದೆ.

## ಸ್ನಾನ ನಿಯಮ

ನಾಭಿಯ ಆಳವಷ್ಟು ಜಲದಲ್ಲಿ ನಿಂತು ಶಿಖೆಯನ್ನು ಬಿಚ್ಚಿ ನದಿಯಲ್ಲಿ ನೀರುಹರಿಯುವ ದಿಕ್ಕಿಗೆ, ಸರೋವರಾದಿಗಳಲ್ಲಿ ಹಗಲಿನಲ್ಲಿ ಪೂರ್ವಾಭಿಮುಖವಾಗಿ ಅಥವಾ ಸೂರ್ಯಾಭಿಮುಖವಾಗಿ, ರಾತ್ರಿ ಉತ್ತರಾಭಿಮುಖವಾಗಿ, ಗೃಹಸ್ನಾನದಲ್ಲಿ ಗೃಹಾಭಿಮುಖವಾಗಿಯೂ ಸ್ನಾನವನ್ನಾಚರಿಸಬೇಕು. ಉತ್ತರೀಯ [ಹೊದೆಯುವ ವಸ್ತ್ರ] ವನ್ನು ಋಗ್ವೇದಿಗಳು ಎಡಮುಂಗೈಮೇಲಿರುವಂತೆಯೂ, ಯಜುರ್ವೇದಿ ಗಳು ಸೊಂಟಕ್ಕೆ ಕಟ್ಟಿಕೊಂಡು ನೀರಿನಲ್ಲಿ ಮೂರುಬಾರಿ ಮುಳುಗಿ ದೇಹದ ಕೊಳೆಯನ್ನು ತೊಳೆಯಬೇಕು ಇದನ್ನು ಮಲಸ್ನಾನವೆನ್ನುತ್ತಾರೆ. ನಂತರ ನೀರಿನಿಂದ ಆಚಮನ ಮಾಡಿ ಅವಗಾಹನಪೂರ್ವಕ ಜಲಸ್ನಾನವನ್ನು ಆಯಾ ನದೀ ಸರೋವರಾದಿಗಳಲ್ಲಿ ಸಂಕಲ್ಪಪೂರ್ವಕ ಮಾಡಬೇಕು. ಮನೆಯಲ್ಲಿ ಸ್ನಾನ ಮಾಡುವಾಗ ತಣ್ಣೀರಿನಿಂದಾಗಲೀ, ಅಥವಾ ಬಿಸಿನೀರಿನಿಂದಾಗಲೀ ಸ್ನಾನ ಮಾಡಬೇಕು, ಸ್ನಾನಪಾತ್ರೆಗೆ ಮೊದಲು ತಣ್ಣೀರನ್ನು ಹಾಕಿ ನಂತರ ಬಿಸಿನೀರು ಹಾಕಿ ತುಲಸೀ ಮೃತ್ತಿಕೆಯನ್ನು ಸೇರಿಸಿ ಅಘಮರ್ಷಣ ಮಂತ್ರವನ್ನು ಹೇಳುತ್ತಾ ಶಿರಸ್ನಾನವನ್ನು ಮಾಡಬೇಕು. [ ಶ್ರೀವರಾಹ ಉವಾಚ– ಮಂತ್ರಸ್ನಾನಂ ಮಲ ಸ್ನಾನಂ ಧ್ಯಾನಸ್ನಾನಂ ಚ ವಾರುಣಂ । ಪಂಚಮಂ ಚ ಜಲಸ್ನಾನಮಿತಿ ಪಂಚವಿಧಂ ಸ್ಮೃತಂ ॥ ನವದ್ವಾರಮಿದಂ ದೇಹಂ ಸ್ರವತ್ಯಹರಹರ್ಮಲಂ । ತತ್ ಶುದ್ಧ್ಯರ್ಥಂ ಪ್ರಕರ್ತವ್ಯಂ ಮಲಸ್ನಾನಂ ದಿನೇದಿನೇ ॥ ಪ್ರಥಮಂ ತ್ರಿರ್ನಿಮಜ್ಜ್ಯಾಪ್ಸು ಕರಾಭ್ಯಾಂ ಶೋಧಯೇತ್ತತಃ । ಸರ್ವಾಣ್ಯಂಗಾನಿ ತ್ರಿಃ ಪಶ್ಚಾನ್ನಿಮಜ್ಜ್ಯಾಚಮ್ಯ ಭಕ್ತಿತಃ ॥ ಮಲಸ್ನಾನಮಿದಂ ಪ್ರೋಕ್ತಮಾವಶ್ಯಕಮಿದಂ ನೃಣಾಂ। ಗಾಯತ್ರ್ಯಾವಾಥ ಮೂಲೇನ ಯಾಃ ಪ್ರವತ ಇತೀರಿಯನ್ । ಪ್ರಾರ್ಥಯಿತ್ವಾ ತತಃ ಕುರ್ಯಾತ್ ಇಮಂ ಮೇ ಗಂಗ ಇತ್ಯೃಚಾ॥ ಮಂತ್ರಯಿತ್ವಾ ನವರ್ಚೇನ ಮಂತ್ರೇಣಾ ಪ್ಯೈವತೇನ ವೈ । ಪಾದಶೋಽರ್ಧರ್ಚಶಶ್ಚೈವ ಋಕ್ಶೋವಾಪಿ ಜಲಂ ಕ್ಷಿಪೇತ್ ॥ ತ್ರಿರ್ಮಜ್ಜನಮಥೋ ಕೃತ್ವಾ ಜಲೇ ಮನ್ಮೂರ್ತಿಮರ್ಚಯೇತ್ । ಧ್ಯಾತ್ವಾ ಜಲಸ್ಥಾಂ ಮನ್ಮೂರ್ತಿಂ ಕುರ್ಯಾದಘಮರ್ಷಣ ಮಾರ್ಜನಮ್ । ಋತಂ ಚೇತಿ ತ್ರ್ಯೃಚೇನಾಪ್ಸು ಜಪಿತ್ವೋನ್ಮಜ್ಯ ವೈ ಪುನಃ ॥ ಮೂಲಮಂತ್ರೇಣಾ ಭಕ್ತಿತಃ । ಜಲೇನೈವ ತು ಕುರ್ವೀತ ಷೋಡಶಾಪ್ಯುಪಚಾರಕಾನ್ ॥ ತತ್ಪಾದ ಸಲಿಲಂ ಮೂರ್ಧ್ನಿ ಧೃತ್ವಾ ತ್ರಿಶ್ಚ ಪಿಬೇತ್ ಪುನಃ । ತತ ಆಚಮ್ಯ ಕುರ್ವೀತ

ತರ್ಪಣಾಂ ಜಲಸಂಸ್ಥಿತಃ ॥ ಬ್ರಹ್ಮಾದಿದೇವಾನ್ ಭೂರ್ದೇವಾನ್ ಭುವರ್ದೇವಾನ್ ಸುವಃ ಸ್ಥಿತಾನ್ । ಭೂರ್ಭುವಃ ಸ್ಥಿತಾನ್ ದೇವಾನ್ ತರ್ಪಯೇತ್ತದ್ವದಪ್ಯಥ ॥ ಋಷೀನ್ ದ್ವೈಪಾಯನಾದೀಂಶ್ಚ ಭೂರ್ಭುವಃ ಸ್ವಸ್ಥಿತಂಸ್ತಥಾ । ಸಂತರ್ಪ ಯೇಚ್ಚಾಗ್ನಿಕವ್ಯವಾಹನಾದೀನ್ ಪಿತೄಂಸ್ತಥಾ ॥ ಏ ಕೇ ಚಾಸ್ಮತ್ಕುಲೇ ಜಾತಾ ಅಪುತ್ರಾ ಗೋತ್ರಿಣೋ ಮೃತಾಃ । ತೇ ಗೃಹ್ಣಂತು ಮಯಾ ದತ್ತಂ ವಸ್ತ್ರನಿಷ್ಪೀಡನೋದಕಂ ॥ ಇತಿ ಮಂತ್ರೇಣ ವಸ್ತ್ರಾಂಭೋ ದದ್ಯಾನ್ನಿಷ್ಪೀಡ್ಯ ಚಾಂಬುನಿ । ತತಸ್ತೀರಂ ಸಮಾಸಾದ್ಯ ಯಕ್ಷ್ಮಾಣಂ ತರ್ಪಯೇತ್ ದ್ವಿಜಃ ॥ ಯನ್ಮಯಾ ದೂಷಿತಂ ತೋಯಮ್ ಶಾರೀರಮಲಸಂಭವಾತ್ । ತತ್ಪಾಪಶೋಧನಾರ್ಥಾಯ ಯಕ್ಷ್ಮಾಣಂ ತರ್ಪಯಾಮ್ಯಹಮ್ ॥ ಇತಿ ಮಂತ್ರೇಣ ಸಂಮಂತ್ರ್ಯ ತೀರೇ ಕ್ಷಿಪ್ತ್ವಾ ತಿಲಾಂಜಲಿಂ ॥ ಎಂದು ನದೀ ಸ್ನಾನವಿಧಿಯನ್ನು ತಿಳಿಸಿದ್ದಾರೆ. ಪ್ರಕೃತ ಸ್ನಾನಕ್ಕೆ ಸಂಬಂಧಿಸಿದ ಕೆಲವು ಶ್ಲೋಕಗಳನ್ನು ಇಲ್ಲಿ ಸಂಗ್ರಹಿಸಿದೆ. ಗೃಹಸ್ನಾನವಿಧಿಯು ಈ ಮುಂದಿನ ಶ್ಲೋಕಗಳಲ್ಲಿ ಹೇಳಲ್ಪಟ್ಟಿದೆ. ಜಲಸ್ನಾನಮಿದಂ ಕಾರ್ಯಂ ಸರ್ವದೈವ ದ್ವಿಜಾತಿಭಿಃ । ಉದ್ಧೃತೇನಾಂಬುನಾ ವಾಪಿ ಕುರ್ಯಾದೇವಂ ತು ನಾನ್ಯಥಾ ॥ ತತ್ರಾಶಕ್ತಃ ಪ್ರಕುರ್ವೀತ ಸ್ನಾನಮುಷ್ಣೇನ ವಾರಿಣಾ । ನಾಸ್ತ್ಯುದ್ಧೃತಜಲಸ್ನಾನೇ ದೇವರ್ಷಿಪಿತೃತರ್ಪಣಂ ॥ ಅಘಮರ್ಷಣಮಂತ್ರಾಸ್ತು ಪಠನ್ನಂಬು ವಿನಿಕ್ಷಿಪೇತ್ । ಸ್ವಮೂರ್ಧನಿ ತತಃ ಕುರ್ಯಾತ್ ನಿತ್ಯಕರ್ಮಂ ವಿಧಾನತಃ । ಶೀತಾಪ್ಸು ನಿಷಿಚ್ಯೋಷ್ಣಂ ವಾರಿ ಪಶ್ಚಾತ್ತು ಶೀತಲಂ । ತುಲಸೀಮೃತ್ತಿಕಾಯುಕ್ತಂ ಗಾಯತ್ರ್ಯಾಚಾಭಿಮಂತ್ರಿತಂ ॥ ಜಲಂ ವಿಧಾಯ ಕುರ್ವೀತ ಯೋ ಹ್ಯಶಕ್ತೋ ಭವೇದ್ದ್ವಿಜಃ । ಅಸ್ನಾತ್ವಾ ಯಸ್ತು ಭುಂಜೀತ ಮಲಭುಕ್ ಸ ನಿಗದ್ಯತೇ ॥ – ಅಧ್ಯಾಯ ೬, ೭ /ವರಾಹಪುರಾಣ ಚಾತುರ್ಮಾಸ್ಯ ಮಹಾತ್ಮೆ ]

## ಜಲ ಸ್ನಾನವಿಧಿ

ಸಂಕಲ್ಪಃ – ಆಚಮ್ಯ ಶ್ರೀಗೋವಿಂದಗೋವಿಂದ ವಿಷ್ಣೋವಿಷ್ಣೋ ಶ್ರೀಮದ್ಭಗವತೋ ಮಹಾಪುರುಷಸ್ಯ ವಿಷ್ಣೋರಚಿಂತ್ಯಶಕ್ತ್ಯಾಧ್ರಿಯಮಾಣೇಽಸ್ಮಿನ್ ಬ್ರಹ್ಮಾಂಡೇ ಅದ್ಯ ಶ್ರೀವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯಾದ್ಯ ಬ್ರಹ್ಮಣೋರ್ದ್ವಿತೀಯಪರಾರ್ಧೇ ಶ್ರೀಶ್ವೇತವರಾಹಕಲ್ಪೇ ವೈವಸ್ವತಮನ್ವಂತರೇ ಅಷ್ಟಾವಿಂಶತಿತಮೇ ಕಲಿಯುಗೇ ಪ್ರಥಮಪಾದೇ ಭರತವರ್ಷೇ, ಭರತಖಂಡೇ,

ಜಂಬೂದ್ವೀಪೇ ದಂಡಕಾರಣ್ಯೇ ಗೋದಾವರ್ಯಾಃದಕ್ಷಿಣೇತೀರೇ ಶಾಲಿವಾಹನಶಕೇ ಬೌದ್ಧಾವತಾರೇ ರಾಮಕ್ಷೇತ್ರೇ, ಅಸ್ಮಿನ್ ವರ್ತಮಾನೇನ ಚಾಂದ್ರಮಾನೇನ ಶ್ರೀ..............ಸಂವತ್ಸರೇ,.................ಅಯನೇ, ............ಋತೌ, ..............ಮಾಸೇ................ಪಕ್ಷೇ, ......... ತಿಥೌ,..................ವಾರೇ, [ ಭಾನುವಾರ– ರವಿವಾಸರ, ಸೋಮ –ಇಂದು, ಮಂಗಳ – ಭೌಮ, ಬುಧ – ಸೌಮ್ಯ, ಗುರು – ಬೃಹಸ್ಪತಿ, ಶುಕ್ರ – ಭೃಗು, ಶನಿ – ಸ್ಥಿರವಾಸರ ಮತ್ತು ಅಂದಿನ ಸಂವತ್ಸರ ಅಯನ, ಋತು, ಮಾಸ, ಪಕ್ಷ, ವಾರ, ನಕ್ಷತ್ರ, ಯೋಗ, ಕರಣ, ತಿಥಿಗಳನ್ನುಚ್ಚರಿಸಿ ] ಏವಂಗುಣವಿಶೇಷಣವಿಶಿಷ್ಟಾಯಾಂ ಶುಭಪುಣ್ಯತಿಥೌ ಮಮಾತ್ಮನಃ ಶ್ರುತಿಸ್ಮೃತಿಪುರಾಣೋಕ್ತಫಲಪ್ರಾಪ್ತ್ಯರ್ಥಂ ಅಸ್ಯಾಂ ಮಹಾನದ್ಯಾಂ ಪೂರ್ವವಾಹಿನ್ಯಾಂ ಪಶ್ಚಿಮೇ ಕೂಲೇ ಉತ್ತರತಟಾಕೇ ಗಂಗಾತೀರೇ ಶ್ರೀವಿಷ್ಣು ವೈಷ್ಣವಸನ್ನಿಧೌ ಶಾಲಗ್ರಾಮಚಕ್ರಾಂಕಿತಸನ್ನಿಧೌ ಶ್ರೀತುಲಸ್ಯಶ್ವತ್ಥ ಸನ್ನಿಧೌ ಅಸ್ಮದಾದಿಗುರೂಣಾಂ ಪರಮಗುರೂಣಾಂ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯಾಣಾಂ ಅಂತರ್ಯಾಮಿ ಸೀತಾಪತಿಶ್ರೀರಾಮಚಂದ್ರ ಪ್ರೀತ್ಯರ್ಥಂ ಪ್ರಾತಃ ಕೃಷ್ಣಾಭಾಗೀರಥ್ಯಾಂಸ್ನಾನಮಹಂಕರಿಷ್ಯೇ।। ............... ಕ್ಷೇತ್ರೇ, [ಗ್ರಾಮೇ], [ ಇಲ್ಲಿ ಕ್ಷೇತ್ರದ ಹೆಸರು ಹೇಳಿಕೊಳ್ಳಬೇಕು. ಉದಾ: ರಜತಪೀಠೇ, ಪಾಜಕಕ್ಷೇತ್ರೇ, ಮಂತ್ರಾಲಯಕ್ಷೇತ್ರೇ ಇತ್ಯಾದಿ ] ಎಂದು ಸಂಕಲ್ಪಿಸಿ, ತೀರ್ಥಪ್ರಾರ್ಥನೆಯನ್ನು ಮಾಡಬೇಕು–ಸಮಸ್ತಜಗದಾಧಾರ ಶಂಖಚಕ್ರಗದಾಧರ। ದೇವದೇಹಿ ಮಮಾನುಜ್ಞಾಮ್ ಯುಷ್ಮತ್ತೀರ್ಥ ನಿಷೇವಣೇ ।। ಯೋಽಸೌ ಸರ್ವಗತೋ ವಿಷ್ಣು ಮೂರ್ಧತಃಶ್ಚಿತ್ಸ್ವರೂಪೀ ನಿರಂಜನಃ । ಸ ಏವದ್ರವರೂಪೇಣ ಗಂಗಾಂಭೋ ನಾತ್ರಸಂಶಯಃ ।। ಗಂಗಾಗಂಗೇತಿ ಯೋ ಬ್ರೂಯಾದ್ಯೋಜ ನಾನಾಂ ಶತೈರಪಿ । ಮುಚ್ಯತೇ ಸರ್ವಪಾಪೇಭ್ಯೋ ವಿಷ್ಣುಲೋಕಂ ಸ ಗಚ್ಛತಿ ।। ನಂದಿನೀ ನಲಿನೀ ಸೀತಾ ಮಾಲತೀ ಚ ಮಲಾಪಹಾ। ವಿಷ್ಣುಪಾದಾಬ್ಜಸಂಭೂತಾ ಗಂಗಾ ತ್ರಿಪಥಗಾಮಿನೀ।। ಭಾಗೀರಥೀ ಭೋಗವತೀ ಜಾಹ್ನವೀ ತ್ರಿದಶೇಶ್ವರೀ ।। ದ್ವಾದಶೈತಾನಿ ನಾಮಾನಿ ಯತ್ರಯತ್ರ ಜಲಾಶಯೇ । ಸ್ನಾನಕಾಲೇ ಪಠೇನ್ನಿತ್ಯಂ ತತ್ರತತ್ರ ವಸಾಮ್ಯಹಂ ।। ಪುಷ್ಕರಾದ್ಯಾನಿ ತೀರ್ಥಾನಿ ಗಂಗಾದ್ಯಾಃ ಸರಿತಸ್ತಥಾ । ಆಗಚ್ಛಂತು ಪವಿತ್ರಾಣಿ ಸ್ನಾನಕಾಲೇ ಸದಾ ಮಮ ।। ಯಾಃ ಪ್ರವತ ಇತಿ ಮಂತ್ರಸ್ಯ ವಸಿಷ್ಠ ಋಷಿಃ, ಸರ್ವಾ ನದ್ಯೋ ದೇವತಾ, ಅತಿಜಗತೀ ಛಂದಃ, ನದೀ ಪ್ರಾರ್ಥನೇ ವಿನಿಯೋಗಃ–

– ಯಾಃಪ್ರವತೋನಿವತಉದ್ವತ ಉದನ್ವತೀರನುದಕಾಶ್ಚಯಾಃ ತಾಅಸ್ಮಭ್ಯಂಪಯಸಾಪಿನ್ವಮಾನಾಃ ಶಿವಾದೇವೀರಶಿಪದಾಭವಂತುಸರ್ವಾನದ್ಯೋ ಅಶಿಮಿದಾಭವಂತು ॥ [ ಎಂದು ಅಂಗುಷ್ಠಾಗ್ರದಿಂದ ನೀರಿನಲ್ಲಿ ಮಂಡಲ ಮಾಡಿ ಸರ್ವತೀರ್ಥಗಳನ್ನು ಆಹ್ವಾನಿಸಿ ಮೂಲಮಂತ್ರವನ್ನು ಹತ್ತುಬಾರಿ ಜಪಿಸಿ ಅಭಿಮಂತ್ರಿಸಿ– ಅಂಗುಷ್ಠಾಗ್ರೇಣ ಕುರ್ವೀತ ಮಂಡಲಾಕೃತಿನಾ ತತಃ। ಆಹ್ವಾನಂ ಸರ್ವತೀರ್ಥಾನಾಂ ಯಾಃ ಪ್ರವತಇತ್ಯೃಚಾ – ವ. ಪುರಾಣ ] ಇಮಂ ಮೇ ಗಂಗ ಇತ್ಯಸ್ಯ ಸಿಂಧು ಕ್ಷಿತ್‌ಪ್ರೈಯಮೇಧೋನದ್ಯೋಜಗತೀ ತ್ರಿವೇಣ್ಯಾಹ್ವಾಹನೇ ವಿನಿಯೋಗಃ ॥ ಓಂ ಇಮಂಮೇಗಂಗೇ ಯಮುನೇಸರಸ್ವತಿಶುತುದ್ರಿ ಸ್ತೋಮಂ ಸಚತಾ ಪರುಷ್ಣ್ಯಾ । ಅಸಿಕ್ನ್ಯಾಮರುದ್ವೃಧೇ ವಿತಸ್ತಾ ಯಾರ್ಜೀಕೀಯೇಶೃಣು ಹ್ಯಾ ಸುಷೋಮಯಾ ॥ [ಎಂದು ತ್ರಿವೇಣಿ ಗಂಗಾ ಯಮುನಾ ಸರಸ್ವತೀ ಸಂಗ ಮವನ್ನು ಆಹ್ವಾನಿಸಿ–ಇಮಂ ಮೇ ಇತಿ ಮಂತ್ರೇಣ ತ್ರಿವೇಣ್ಯಾವಾಹನಂ ತತಃ –ವ.ಪುರಾಣ] ಓಂ ಹಿರಣ್ಯಶೃಂಗಂ ವರುಣಂ ಪ್ರಪದ್ಯೇ ತೀರ್ಥಂ ಮೇದೇಹಿ ಯಾಚಿತಃ। ಯನ್ಮಯಾ ಭುಕ್ತಮಸಾಧೂನಾಂ ಪಾಪೇಭ್ಯಶ್ಚ ಪ್ರತಿಗ್ರಹಃ ॥ ಯನ್ಮೇ ಮನಸಾವಾಚಾ ಕರ್ಮಣಾ ವಾ ದುಷ್ಕೃತಂ ಕೃತಂ । ತನ್ನ ಇಂದ್ರೋ ವರುಣೋಬೃಹಸ್ಪತಿಃ ಸವಿತಾ ಚ ಪುನಂತು ಪುನಃಪುನಃ ॥ ಗಂಡೂಷಂ ಪಾದವಿಕ್ಷೇಪಂ ಕ್ಷಾಲನಂ ಮಲಿನಸ್ಯ ಚ । ಉತ್ಕ್ಷೇಪಕ್ಷೇಪಣೌ ದೇಹಿ ಮತ್ಕೃತಂ ಕ್ಷಮಪಾಹಿಮಾಂ ॥ ಈ ರೀತಿ ಕ್ಷಮಾಪಣೆಯನ್ನು ಬೇಡಿ ಶಿಖೆಯನ್ನು ಬಿಚ್ಚಿ ಮೂರುಬಾರಿ ಮುಳುಗಿ ಶರೀರವನ್ನೆಲ್ಲಾ ತಿಕ್ಕಿ ಮಲಸ್ನಾನವನ್ನು ಮಾಡಿ ಅವಗಾಹನಸ್ನಾನಾಂಗವಾಗಿ ಓಂ ಆಪೋಹಿಷ್ಠೇತಿ ತೃಚಸ್ಯಸೂಕ್ತಸ್ಯ ಅಂಬರೀಷಃ ಸಿಂಧುದ್ವೀಪಋಷಿಃ ಆಪೋದೇವತಾ ಗಾಯತ್ರೀಛಂದಃ ಮಾರ್ಜನೇ ವಿನಿಯೋ ಗಃ ॥ ಓಂ ಆಪೋಹಿಷ್ಠಾ ಮಯೋಭುವಃ। ಓಂ ತಾನಊರ್ಜೇ ದಧಾತನ। ಓಂ ಮಹೇರಣಾಯ ಚಕ್ಷಸೇ। ಓಂ ಯೋವಶ್ಶಿವತಮೋರಸಃ। ಓಂತಸ್ಯ ಭಾಜಯತೇ ಹನಃ । ಓಂ ಉಶತೀರೀವಮಾತರಃ । ಓಂ ತಸ್ಮಾ ಅರಂಗ ಮಾಮವಃ । ಓಂ ಯಸ್ಯಕ್ಷಯಾಯ ಜಿನ್ವಥ । ಓಂ ಆಪೋಜನಯಥಾಚನಃ ॥ ಎಂದು ಶರೀರಕ್ಕೆ ಪ್ರೋಕ್ಷಿಸಿಕೊಂಡು ಉಸಿರನ್ನು ಹಿಡಿದು ನೀರಲ್ಲಿ ಮುಳುಗಿ ಓಂ ಋತಂಚೇತ್ಯಸ್ಯ ಮಂತ್ರಸ್ಯ ಅಘಮರ್ಷಣಋಷಿಃ ಭಾವವೃತ್ತೋ ದೇವತಾ ಅನುಷ್ಟುಪ್ ಛಂದಃ ಅಘಮರ್ಷಣೇ ವಿನಿಯೋಗಃ ॥ ಓಂ ಋತಂ ಚ ಸತ್ಯಂಚಾಭೀದ್ಧಾತ್ತಪಸೋಽಧ್ಯ

ಜಾಯತ । ತತೋ ರಾತ್ರ್ಯಜಾಯತ ತತಃ ಸಮುದ್ರೋ ಅರ್ಣವಃ । ಸಮುದ್ರಾ ದರ್ಣವಾದಧಿ ಸಂವತ್ಸರೋ ಅಜಾಯತ । ಅಹೋರಾತ್ರಾಣಿ ವಿದಧದ್ವಿಶ್ವಸ್ಯ ಮಿಷತೋ ವಶೀ । ಸೂರ್ಯಾಚಂದ್ರಮಸೌ ಧಾತಾ ಯಥಾಪೂರ್ವಮಕಲ್ಪಯತ್। ದಿವಂ ಚ ಪೃಥಿವೀಂ ಚಾಂತರಿಕ್ಷಮಥೋಸ್ವಃ ।। ಎಂದು ಅಘಮರ್ಷಣಸೂಕ್ತವನ್ನು ಜಪಿಸಬೇಕು. ನಂತರ ಬಲಗೈ ಮುಷ್ಟಿಮಾಡಿ ಹೆಬ್ಬೆರಳು ಹೊರಚಾಚಿರುವಂತೆ [ಶಂಖ ಮುದ್ರೆ] ಪುರುಷ ಸೂಕ್ತದಿಂದ ನೀರನ್ನು ಎತ್ತಿ ತಲೆಯಮೇಲೆ ಹಾಕಿಕೊಳ್ಳಬೇಕು. ಶಿಖೆಯನ್ನು ಕಟ್ಟಿ ಆಚಮನ ಮಾಡಿ, ನೀರಿನಿಂದಲೇ ದ್ವಾದಶನಾಮ ಧರಿಸಿ, ನಮಃ ಕಮಲನಾಭಾಯ ನಮಸ್ತೇ ಜಲಶಾಯಿನೇ । ನಮಸ್ತೇಸ್ತು ಹೃಷೀಕೇಶ ಗೃಹಾಣಾರ್ಘ್ಯಂ ನಮೋಸ್ತು ತೇ ।। ವಿಷ್ಣ್ವರ್ಘ್ಯ ನೀಡಿ ಏಹಿ ಸೂರ್ಯಸಹಸ್ರಾಂಶೋ ತೇಜೋರಾಶೇ ಜಗತ್ಪತೇ । ಅನುಕಂಪಯ ಮಾಂ ಭಕ್ತಂ ಗೃಹಾಣಾರ್ಘ್ಯಂ ನಮೋಸ್ತು ತೇ ।। ಎಂದು ಸೂರ್ಯಾರ್ಘ್ಯ ನೀಡಬೇಕು. ವಿಷ್ಣುಪಾದಾಬ್ಜಸಂಭೂತೇ ಗಂಗೇ ತ್ರಿಪಥಗಾಮಿನೀ । ಗೃಹಾ ಣಾರ್ಘ್ಯಂ ಮಯಾ ದತ್ತಂ ಜಲೇಸನ್ನಿಹಿತಾ ಭವ ।। ಎಂದು ಗಂಗೆಗೆ ಅರ್ಘ್ಯ ನೀಡಬೇಕು. ಅನ್ಯನದೀಸರೋವರಾದಿಗಳಲ್ಲಿ ಅರ್ಘ್ಯಮಂತ್ರ ತಿಳಿಯದಿದ್ದರೇ ಆಯಾತೀರ್ಥಾಂತರ್ಗತ ಆಯಾ ರೂಪಿ ಶ್ರೀಮನ್ನಾರಾಯಣಾಯ ನಮಃ ಎಂದು ಅನುಸಂಧಾನ ಮಾಡಿಕೊಳ್ಳಬೇಕು. ನೀರಿನಿಂದಲೇ ಷೋಡಶೋಪಚಾರ ಪೂಜೆಮಾಡಿ, ಆಚಮನ ಮಾಡಿ ಅಧಿಕಾರವಿದ್ದವರು [ ತಂದೆ ಬದುಕಿದ್ದವರಿಗೆ ಸ್ನಾನಾಂಗ ದೇವ, ಋಷಿ ತರ್ಪಣ, ಹಾಗೂ ಭೂಪಿತ್ರ್ಯನ್ ತರ್ಪಯಾಮಿ ಎಂಬ ಪಿತೃತರ್ಪಣದಲ್ಲಿ ಅಧಿಕಾರವಿದೆ. ಸ್ನಾನಾಂಗ ಶಿಖೋದಕ, ವಸ್ತ್ರನಿಷ್ಪೀಡನ, ಯಕ್ಷ್ಮತರ್ಪಣಾದಿಗಳಲ್ಲಿ . ಅಧಿಕಾರವಿಲ್ಲ. ಹೆಚ್ಚಿನ ಮಾಹಿತಿಗಳು ನಿಯಮ ಪುಟಟರಲ್ಲಿದೆ. ] ಸ್ನಾನಾಂಗ ಜಲತರ್ಪಣವನ್ನು ಈ ರೀತಿಯಾಗಿ ನೀಡಬೇಕು. ಗಂಗಾಸ್ನಾನದಲ್ಲಿ ಗಂಗೆಯನ್ನು ಹೊರತುಪಡಿಸಿ ಅನ್ಯನದೀ ಸ್ಮರಣೆಮಾಡಬಾರದು, [ಗೋದಾವರ್ಯಾದಿ ಅನ್ಯ ನದೀ, ಜಲಾಶಯಾದಿಗಳಲ್ಲಿ ಗಂಗಾರ್ಘ್ಯ, ಗಂಗಾಸ್ಮರಣೆ ಮಾಡಲೇಬೇಕು. ಇದಕ್ಕೆ ಪೂರಕವಾಗಿ ಶ್ರೀಮದಾಚಾರ್ಯರು ಶ್ರೀಅಚ್ಯುತಪ್ರೇಕ್ಷರಿಗಾಗಿ ಶ್ರೀ ಮಧ್ವಸರೋವರದಲ್ಲಿ ಗಂಗಾಸನ್ನಿಧಾನವನ್ನುಂಟು ಮಾಡಿದ್ದು, ಶ್ರೀಶ್ರೀಪಾದರಾಜರು ಶ್ರೀಸ್ವರ್ಣವರ್ಣತೀರ್ಥರಿಗಾಗಿ ಶ್ರೀನರಸಿಂಹ ತೀರ್ಥದಲ್ಲಿ ಗಂಗಾಸನ್ನಿಧಾನವನ್ನು ತರಿಸಿದ್ದನ್ನು, ಇಲ್ಲಿ ಸ್ಮರಿಸಬಹುದು. ]

**೧. ದೇವತರ್ಪಣಕ್ರಮ :** ಉಪವೀತೀ [ಜನಿವಾರ ಬಲಕ್ಕಿರುವಂತೆ], ಪೂರ್ವದಿಕ್ಕು, ದೇವತೀರ್ಥದಿಂದ ಒಂದೊಂದು ಬೊಗಸೆ ನೀರು ೧. ಬ್ರಹ್ಮಾದಯೋ ಯೇ ದೇವಾಸ್ತಾಂದೇವಾಂಸ್ತರ್ಪಯಾಮಿ । ೨. ಭೂರ್ದೇವಾಂಸ್ತರ್ಪಯಾಮಿ। ೩.ಭುವರ್ದೇವಾಂಸ್ತರ್ಪಯಾಮಿ। ೪.ಸ್ವರ್ದೇವಾಂಸ್ತರ್ಪಯಾಮಿ। ೫.ಭೂರ್ಭುವಃಸ್ವರ್ದೇವಾಂಸ್ತರ್ಪಯಾಮಿ। ಎಂದು ದೇವತರ್ಪಣ ನೀಡಬೇಕು.

**೨. ಋಷಿತರ್ಪಣಕ್ರಮ :** ನಿವೀತೀ [ಜನಿವಾರ ಮಾಲಾಕಾರ], ಉತ್ತರದಿಕ್ಕು, ಋಷಿತೀರ್ಥದಿಂದ ಎರಡೆರಡುಬೊಗಸೆ ನೀರು ೧.ಕೃಷ್ಣದ್ವೈಪಾಯನಾದಯೋ ಯೇ ಋಷಯಃ ತಾನ್ ಋಷೀನ್ ತರ್ಪಯಾಮಿ। ೨. ಭೂಃ ಋಷೀನ್ ತರ್ಪಯಾಮಿ। ೩. ಭುವಃ ಋಷೀನ್ ತರ್ಪಯಾಮಿ । ೪. ಸ್ವಃ ಋಷೀನ್ ತರ್ಪಯಾಮಿ । ೫. ಭೂರ್ಭುವಃಸ್ವಃ ಋಷೀನ್ ತರ್ಪಯಾಮಿ ಎಂದು ತರ್ಪಣ ನೀಡಬೇಕು.

**೩. ಪಿತೃತರ್ಪಣ :** ಪ್ರಾಚೀನಾವೀತಿ[ ಜನಿವಾರ ಎಡಕ್ಕಿರುವಂತೆ], ದಕ್ಷಿಣದಿಕ್ಕು, ಪಿತೃತೀರ್ಥದಿಂದ ಮೂರು ಮೂರು ಬೊಗಸೆ ನೀರು. ೧. ಸೋಮಃಪಿತೃಮಾನ್ ಯಮೋಂಗಿರಸ್ವಾನಗ್ನಿಷ್ವಾತ್ತಾಃ ಕವ್ಯವಾಹನಾದಯೋ ಯೇ ಪಿತರಃ ತಾನ್ಪಿತ್ರ್ಯಾಂಸ್ತರ್ಪಯಾಮಿ । ೨. ಭೂಃ ಪಿತ್ರ್ಯಾಂಸ್ತರ್ಪಯಾಮಿ । ೩. ಭುವಃ ಪಿತ್ರ್ಯಾಂಸ್ತರ್ಪಯಾಮಿ। ೪. ಸ್ವಃ ಪಿತ್ರ್ಯಾಂಸ್ತರ್ಪಯಾಮಿ । ೫. ಭೂರ್ಭುವಃ ಸ್ವಃ ಪಿತ್ರ್ಯಾಂಸ್ತರ್ಪಯಾಮಿ ॥ ಎಂದು ತರ್ಪಣ ನೀಡಬೇಕು. ನಂತರ ಆಬ್ರಹ್ಮಸ್ತಂಬ ಪರ್ಯಂತಂ ದೇವರ್ಷೀ ಪಿತೃಮಾನವಾಃ । ತೃಪ್ಯಂತುಪಿತರಃ ಸರ್ವೇ ಮಾತೃಮಾತಾಮಹಾದಯಃ ॥ ಅತೀತಕುಲಕೋಟೀನಾಂ ಸಪ್ತದ್ವೀಪ ನಿವಾಸಿನಾಂ । ಆಬ್ರಹ್ಮಭುವನಾಲ್ಲೋಕಮ್ ಆಯಮಸ್ತುಜಲಾಂಜಲಿಃ ॥ ಅಗ್ನಿದಗ್ಧಾಶ್ಚ ಯೇ ಜೀವಾಃ ಯೇಽಪ್ಯದಗ್ಧಾಃ ಕುಲೇ ಮಮ । ಭೂಮೌ ದತ್ತೇನ ತೋಯೇನ ತೃಪ್ತಾಯಾಂತು ಪರಾಂಗತಿಂ॥ ಎಂದು ದಡದಲ್ಲಿ ಒಂದು ಬೊಗಸೆ ನೀರನ್ನು ನೀಡಬೇಕು.

**೪. ಶಿಖೋದಕ :** ಪ್ರಾಚೀನಾವೀತಿಯಾಗಿ ಬಲಹೆಗಲಿನಮೇಲಿನಿಂದ ಶಿಖೆಯನೀರು ಬೀಳುವಂತೆ ಶಿಖೆಯನ್ನು ಈ ಮಂತ್ರದಿಂದ ಹಿಂಡಬೇಕು.– ಶಿಖೋದಕಂ ಭೂಪತಿತಂ ಪಿಬಂತಿ ಪಿತರೋಽಖಿಲಾಃ । ತಸ್ಮಾಚ್ಛಿಖೋದಕಂ ದದ್ಯಾತ್ ಪಿತೄಣಾಂ ತೃಪ್ತಿಹೇತವೇ ॥ ಅರ್ಯಮಾದ್ಯಾಃ ಪಿತೃಗಣಾಃ ಪಕ್ಷಿರಾಜ

ಕೃಪಾಲಯಾಃ । ತೇ ಗೃಹ್ಣಂತು ಮಯಾ ದತ್ತಂ ಶಿಖಾಸ್ಥಮಮೃತೋದಕಂ ॥ ಲತಾಗುಲ್ಮೇಷು ವೃಕ್ಷೇಷು ಯೇ ಜಾತಾಃ ಪಿತರೋಽಖಿಲಾಃ । ತೇಷಾಂ ತುಷ್ಟ್ಯರ್ಥಂ ವಿಸೃಜೇ ಶಿಖೋದಕಮಿದಂ ಭುವಿ ॥ .

***೫. ವಸ್ತ್ರನಿಷ್ಪೀಡನೋದಕ :*** ನಿವೀತೀಯಾಗಿ, ಉತ್ತರೀಯವಸ್ತ್ರವನ್ನು [ಯಜುರ್ವೇದಿಗಳು ಸ್ನಾನಕಾಲದಲ್ಲಿ ಸೊಂಟಕ್ಕೆ ಕಟ್ಟಿದ್ದು, ಋಗ್ವೇದಿಗಳು ಮುಂಗೈಮೇಲೆ ಇಟ್ಟಿದ್ದು] ನಾಲ್ಕು ಮಡಿಕೆಯಾಗಿ ಮಡಿಸಿ–ಯೇ ಕೇ ಚಾಸ್ಮತ್ಕುಲೇ ಜಾತಾ ಅಪುತ್ರಾ ಗೋತ್ರಿಣೋ ಮೃತಾಃ । ತೇ ಗೃಹ್ಣಂತು ಮಯಾ ದತ್ತಂ ವಸ್ತ್ರನಿಷ್ಪೀಡನೋದಕಂ ॥ ಎಂದು ವಸ್ತ್ರವನ್ನು ಹಿಂಡಬೇಕು.

***೬. ಯಕ್ಷ್ಮತರ್ಪಣ :*** ಉಪವೀತಿಯಾಗಿ, ದಡದಲ್ಲಿ, ಯನ್ಮಯಾ ದೂಷಿತಂ ತೋಯಂ ಶಾರೀರಮಲಸಂಭವಂ । ತಸ್ಯ ಪಾಪವಿಶುದ್ಧ್ಯರ್ಥಂ ಯಕ್ಷ್ಮಾಣಂ ತರ್ಪಯಾಮ್ಯಹಂ॥ ಎಂದು ಒಂದು ಬೊಗಸೆ ನೀರು ಬಿಡಬೇಕು.

## *೬. ಜಪಾಂಗ ದೇವ ತರ್ಪಣ*

***೧. ಸಂಧ್ಯಾಂಗತರ್ಪಣ :*** ಸಂಧ್ಯಾರ್ಘ್ಯಾನಂತರ ಕೇಶವಾದಿ ದಾಮೋದರಪರ್ಯಂತ ಶುಕ್ಲಪಕ್ಷದಲ್ಲಿ , ಕೃಷ್ಣಪಕ್ಷದಲ್ಲಿ ಸಂಕರ್ಷಣಾದಿ ಶ್ರೀಕೃಷ್ಣಪರ್ಯಂತವಾಗೂ ಇದರೊಂದಿಗೆ ಇಂದ್ರಾದಿ ಅಷ್ಟದಿಕ್ಪಾಲಕಳು, ಆದಿತ್ಯಾದಿ ನವಗ್ರಹಗಳಿಗೂ ದೇವತೀರ್ಥದಿಂದ ನೀಡುವುದು ಸಂಧ್ಯಾಂಗ ತರ್ಪಣವೆನಿಸಿಕೊಳ್ಳುತ್ತದೆ. ಇದಕ್ಕೆ ಉಪನೀತರಾದವರೆಲ್ಲರೂ ಅಧಿಕಾರಿಗಳು. ಏಕಾದಶೀ, ಗೋಕುಲಾಷ್ಟಮೀ, ಅತಿರಿಕ್ತ ಏಕಾದಶಿಗಳಂದು ಕೇಶವಾದಿ ಇಪ್ಪತ್ನಾಲ್ಕು ಭಗವದ್ರೂಪಗಳಿಗೆ ಮಾತ್ರ ತರ್ಪಣ ನೀಡಬೇಕು. ಅನ್ಯತರ್ಪಣವಿಲ್ಲ, ಸೂರ್ಯಾರ್ಘ್ಯ ಎಂತಾ ಸಂದರ್ಭದಲ್ಲೂ ಕಡ್ಡಾಯ.

**೨. ಮಂತ್ರಜಪಾಂಗತರ್ಪಣ :** ಉಪದೇಶವಿದ್ದ ಅಷ್ಟಮಹಾಮಂತ್ರ, ರಾಘವೇಂದ್ರ ಅಷ್ಟಾಕ್ಷರ ಇತ್ಯಾದಿ ಯತಿಗಳ ಮಂತ್ರ, ನವಗ್ರಹಾದಿ ಮಂತ್ರ ಜಪಗಳಲ್ಲಿ ಹತ್ತುಜಪಕ್ಕೆ ಒಂದುತರ್ಪಣ ದೇವತೀರ್ಥದಿಂದ ನೀಡಬೇಕು. ಏಕಾದಶ್ಯಾದಿ ಉಪವಾಸದಂದು ಶ್ರೀಹರಿಯನ್ನು ಹೊರತುಪಡಿಸಿ ಅನ್ಯದೇವತಾ ಮಂತ್ರ, ಯತಿಗಳ ಮಂತ್ರ ಜಪ ಮಾಡಿದಾಗ ತರ್ಪಣವನ್ನು ಮಂತ್ರಸಂಖ್ಯೆಯನ್ನನುಸರಿಸಿ [೧೦ಕ್ಕೆ ಒಂದರಂತೆ] ಪಾರಣೆಯ ದಿನದಂದು ನೀಡಬೇಕು.

## ೮. ಬ್ರಹ್ಮಯಜ್ಞಾಂಗ ತರ್ಪಣ

ಬ್ರಹ್ಮಯಜ್ಞಾಂಗ ದೇವ, ಋಷಿ, ಪಿತೃ ತರ್ಪಣದಲ್ಲಿ ದೇವ ಋಷಿ ಪಿತೃತರ್ಪಣವನ್ನು ತಂದೆಯಿಲ್ಲದವರೂ, ದೇವ, ಋಷಿ ಆಚಾರ್ಯ ತರ್ಪಣವನ್ನು ತಂದೆ ಬದುಕಿರುವವರೂ, ಬ್ರಹ್ಮಯಜ್ಞಾನಂತರ ನೀಡಬೇಕು. [ ಕವ್ಯ ವಾಹೋsನಲಃ ಸೋಮೋ ಯಮ ಶ್ಚೈವಾರ್ಯಮಾ ತಥಾ । ಅಗ್ನಿಷ್ವಾತ್ತಾ ಬರ್ಹಿಷದಃ ಸೋಮಪಾ ಆಜ್ಯಪಾಸ್ತಥಾ ॥ ಸಪದಿ ಸ್ಯಾತ್ ಜ್ಜೀವತ್ಪಿತೃಕಃ ಏಭ್ಯೋ ದದ್ಯಾಜ್ಜಲಾಂಜಲಿಂ ॥ ಎಂದು ಜೀವತ್ಪಿತೃಕನಿಗೆ ಬ್ರಹ್ಮಯಜ್ಞಾಂಗ ಪಿತೃ ತರ್ಪಣ ಹೇಳಲಾಗಿದೆ. ಛಲಾರಿ ಸ್ಮೃತ್ಯರ್ಥ ಸಾಗರ ಹಾಗೂ ಕೃಷ್ಣಾಚಾರ್ಯಸ್ಮೃ.ಮು. ವಳಿಯಲ್ಲಿ ಹೇಳಿದೆ. ಅವರವರ ಸಂಪ್ರದಾಯದಂತೆ ಆಚರಿಸುವುದು. ]

### ಸಂಕ್ಷಿಪ್ತ ಬ್ರಹ್ಮಯಜ್ಞ: [ ಋಗ್ವೇದೀಯ ]

ಆಚಮ್ಯ ಪ್ರಾಣಾನಾಯಮ್ಯ, ದೇಶಕಾಲಾದೀನುಚ್ಚಾರ್ಯ, ಶ್ರೀವಿಷ್ಣು ಪ್ರೇರಣಯಾ, ಶ್ರೀವಿಷ್ಣುಪ್ರೀತ್ಯರ್ಥಂ ಬ್ರಹ್ಮಯಜ್ಞೇನ ಯಕ್ಷ್ಯೇ ಇತಿ ಸಂಕಲ್ಪ್ಯ। [ ಎಡಗಾಲಿನ ಮೇಲೆ ಬಲಗಾಲು ಬರುವಂತೆ ಬ್ರಹ್ಮಾಸನದಲ್ಲಿ ಕುಳಿತು ಬಲತೊಡೆಯಮೇಲೆ ಎಡಗೈಯನ್ನು ಮೇಲ್ಮುಖವಾಗಿ ನಿರ್ಮಾಲ್ಯತೀರ್ಥ ಅಥವಾ ಶುದ್ಧವಾದ ನೀರಿನೊದಿಗೆ ಎರಡು ದರ್ಭೆಗಳನ್ನು ಅಗ್ರಪೂರ್ವಕ್ಕಿರುವಂತೆ ಹಿಡಿದು ಪವಿತ್ರ ಧರಿಸಿದ {ಪವಿತ್ರವಿಲ್ಲದಿದ್ದರೆ ನಿರ್ಮಾಲ್ಯತುಳಸಿ ಧರಿಸಿ} ಬಲಗೈಯನ್ನು ಮುಚ್ಚಬೇಕು.]

ಓಂ ವಿದ್ಯುದಸಿ ವಿದ್ಯಮೇ ಪಾಪ್ಮಾನಮಮೃತಾತ್ಸತ್ಯಮುಪೈಮಿ॥ [ ಇತಿ ಆಪಃ ಸ್ಪೃಷ್ಟ್ವಾ ] ಓಂ ಭೂರ್ಭುವಃ ಸ್ವಃ ತತ್ಸವಿತುರ್ವರೇಣ್ಯಂ ಭರ್ಗೋದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ ॥ [ಎಂದು ಮೂರುಬಾರಿ ಗಾಯತ್ರಿಯನ್ನು ಉಚ್ಚರಿಸಿ] ಓಂ ನಮೋ ಬ್ರಹ್ಮಣೇ ನಮೋ ಅಸ್ತ್ವಗ್ನಯೇ ನಮಃ ಪೃಥಿವ್ಯೈ ನಮಃ ಓಷಧೀಭ್ಯಃ । ನಮೋ ವಾಚೇ ನಮೋ ವಾಚಸ್ಪತಯೇ ನಮೋ ವಿಷ್ಣವೇ ಮಹತೇ ಕರೋಮಿ ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥ ಓಂ ವೃಷ್ಟಿರಸಿ ವೃಶ್ಚಮೇ ಪಾಪ್ಮಾನಮೃತಾತ್ಸತ್ಯಮುಪಾಗಾಂ॥ ಇತಿ ಅಪಮುಪಸ್ಪೃಶ್ಯ ಸಮಾಪಯೇತ್ ॥

### ಬ್ರಹ್ಮಯಜ್ಞಾಂಗ ತರ್ಪಣಗಳು

**೧. ದೇವತರ್ಪಣ:** ಪೂರ್ವಾಭಿಮುಖವಾಗಿ ಉಪವೀತಿಯಾಗಿ [ ಸವ್ಯ ], ದೇವತೀರ್ಥದಿಂದ, ಕುಶಾಗ್ರ [ ದರ್ಭೆಯತುದಿ ] ಒಂದೊಂದು ಬಾರಿ ನೀಡುವುದು.

[ ದೇವತಾಸ್ತರ್ಪಯತಿಪ್ರಜಾಪತಿ ರ್ಬ್ರಹ್ಮಾವೇದಾದೇವಾಋಷಯಃ ಸರ್ವಾಣಿ ಛಂದಾಂಸ್ಯೋಂಕಾರೋವಷಟ್ಕಾರೋ ವ್ಯಾಹೃತಯಃ ಸಾವಿತ್ರೀಯಜ್ಞಾ ದ್ಯಾವಾಪೃಥಿವೀಅಂತರಿಕ್ಷಮಹೋರಾತ್ರಾಣಿಸಾಂಖ್ಯಾಃ ಸಿದ್ಧಾಃ ಸಮುದ್ರಾನದ್ಯೋ ಗಿರಯಃ ಕ್ಷೇತ್ರೌಷಧಿವನಸ್ಪತಿಗಂಧರ್ವಾಪ್ಸರಸೋನಾಗಾ ವಯಾಂಸಿ ಗಾವಃ ಸಾಧ್ಯಾವಿಪ್ರಾಯಕ್ಷಾರಕ್ಷಾಂಸಿಭೂತಾನ್ಯೇವಮಂತಾನಿ–ಆಶ್ವಲಾಯನಗೃಹ್ಯಸೂತ್ರ ಅಧ್ಯಾಯ/೩ ] ಯದ್ಯಪ್ಯಾಶ್ವಲಾಯನಸೂತ್ರೇ ದೇವತರ್ಪಣೇ ದೇವತಾ ಸ್ತರ್ಪಯಂತಿ। ಪ್ರಜಾಪತಿಬ್ರಹ್ಮೇತ್ಯೇವೋಕ್ತೇಃ । ಅಗ್ನಿವಿಷ್ಣ್ವೋರನುಕ್ತಾವಪಿ ಶೌನಕಸ್ಮೃತೌ ತಯೋರುಕ್ತೇಃ। ತರ್ಪಣಕಾಲೇ ಆದೌ ತೌ [ ಅಗ್ನಿ, ವಿಷ್ಣು] ಗೃಹ್ಯೇತೇ । ಛಲಾರಿ ಸ್ಮೃತ್ಯರ್ಥ ಸಾಗರ ]

ಓಂ ದೇವತಾಸ್ತರ್ಪಯಂತಿ । ಅಗ್ನಿಸ್ತೃಪ್ಯತು । ವಿಷ್ಣುಸ್ತೃಪ್ಯತು । ಪ್ರಜಾಪತಿ ಸ್ತೃಪ್ಯತು । ಬ್ರಹ್ಮಾ ತೃಪ್ಯತು । ವೇದಾಸ್ತೃಪ್ಯಂತು । ಋಷಯಸ್ತೃಪ್ಯಂತು । ಸರ್ವಾಣಿ ಛಂದಾಂಸಿ ತೃಪ್ಯಂತು । ಓಂಕಾರಸ್ತೃಪ್ಯತು । ವಷಟ್ಕಾರಸ್ತೃಪ್ಯತು । ವ್ಯಾಹೃತಯ ಸ್ತೃಪ್ಯಂತು । ಸಾವಿತ್ರೀ ತೃಪ್ಯತು । ಯಜ್ಞಾಸ್ತೃಪ್ಯಂತು । ದ್ಯಾವಾ ಪೃಥಿವ್ಯೌ ತೃಪ್ಯೇತಾಂ । ಅಂತರಿಕ್ಷಾಣಿ ತೃಪ್ಯಂತು । ಅಹೋರಾತ್ರಾಣಿ ತೃಪ್ಯಂತು। ಸಾಂಖ್ಯಾಃ ತೃಪ್ಯಂತು । ಸಿದ್ಧಾಃ ತೃಪ್ಯಂತು । ಸಮುದ್ರಾಃ ತೃಪ್ಯಂತು। ನದ್ಯಃ ತೃಪ್ಯಂತು। ಗಿರಯಸ್ತೃಪ್ಯಂತು। ಕ್ಷೇತ್ರೌಷಧಿವನಸ್ಪತಿಗಂಧರ್ವಾಪ್ಸರಸ ಸ್ತೃಪ್ಯಂತು। ನಾಗಾಸ್ತೃಪ್ಯಂತು । ವಯಾಂಸಿತೃಪ್ಯಂತು । ಗಾವಃ ತೃಪ್ಯಂತು । ಸಾಧ್ಯಾಸ್ತೃಪ್ಯಂತು। ವಿಪ್ರಾಸ್ತೃಪ್ಯಂತು । ಯಕ್ಷಾಸ್ತೃಪ್ಯಂತು । ರಕ್ಷಾಂಸಿ ತೃಪ್ಯಂತು । ಭೂತಾನಿ ತೃಪ್ಯಂತು । ಏವಮಂತಾನಿ ತೃಪ್ಯಂತು ।

**೨. ಋಷಿತರ್ಪಣ:** ಉತ್ತರಾಭಿಮುಖವಾಗಿ ನೀವೀತಿ[ಜನಿವಾರ ಮಾಲಾ ಕಾರ] ಋಷಿತೀರ್ಥ [ಕಿರುಬೆರಳಿನ ಬುಡ] ದಿಂದ ಎರಡೆರಡು ಬಾರಿ ನೀಡುವುದು. [ ಅಥ ಋಷಯಃ ಶತರ್ಚಿನೋಮಾಧ್ಯಮಾಗೃತ್ಸಮದೋ ವಿಶ್ವಾಮಿತ್ರೋ ವಾಮದೇವೋತ್ರಿರ್ಭರದ್ವಾಜೋವಸಿಷ್ಠಃಪ್ರಗಾಥಾಃಪಾವಮಾನ್ಯಃ ಕ್ಷುದ್ರ ಸೂಕ್ತಾಮಹಾಸೂಕ್ತಾಇತಿ ಆಶ್ವಲಾಯನ ಗೃಹ್ಯಸೂತ್ರ /ಅಧ್ಯಾಯ – ೩ ]

ಓಂ ಶತರ್ಚಿನಸ್ತೃಪ್ಯಂತು। ಮಾಧ್ಯಮಾಸ್ತೃಪ್ಯಂತು । ಗೃತ್ಸಮದಸ್ತೃಪ್ಯತು । ವಿಶ್ವಾಮಿತ್ರ ಸ್ತೃಪ್ಯತು । ವಾಮದೇವಸ್ತೃಪ್ಯತು । ಅತ್ರಿಸ್ತೃಪ್ಯತು । ಭರದ್ವಾಜ ಸ್ತೃಪ್ಯತು । ವಸಿಷ್ಠಸ್ತೃಪ್ಯತು । ಪ್ರಗಾಥಾಸ್ತೃಪ್ಯತು। ಪಾವಮಾನ್ಯಸ್ತೃಪ್ಯಂತು । ಕ್ಷುದ್ರಸೂಕ್ತಾಸ್ತೃಪ್ಯಂತು । ಮಹಾಸೂಕ್ತಾಸ್ತೃಪ್ಯಂತು । ಸನಕಸ್ತೃಪ್ಯತು ।

ಸನಂದನಸ್ತೃಪ್ಯತು। ಸನತ್ಸುಜಾತಸ್ತೃಪ್ಯತು । ಸನಾತನಸ್ತೃಪ್ಯತು । ಸನತ್ಕುಮಾರಸ್ತೃಪ್ಯತು। ಕಪಿಲಸ್ತೃಪ್ಯತು । ಓಘುರಿಸ್ತೃಪ್ಯತು । ಆಸುರೀ ತೃಪ್ಯತು । ಪಂಚಶಿಖಾಸ್ತೃಪ್ಯಂತು ॥

೩. ***ಆಚಾರ್ಯತರ್ಪಣ ;*** ತಂದೆಯಿರುವವರು ಆಗ್ನೇಯಾಭಿಮುಖವಾಗಿ [ ಪೂರ್ವ ಮತ್ತು ದಕ್ಷಿಣದಿಕ್ಕುಗಳ ಮಧ್ಯದದಿಕ್ಕು ], ಉಪವೀತಿಯಾಗಿ, ತಂದೆಯಿಲ್ಲದವರು ಪ್ರಾಚೀನಾವೀತಿಯಾಗಿ ಪಿತೃತೀರ್ಥದಿಂದ ಮೂರುಮೂರು ಬಾರಿ ನೀಡಬೇಕು. [ ಸುಮಂತುಜೈಮಿನಿ ವೈಶಂಪಾ ಯನಪೈಲಸೂತ್ರ ಭಾಷ್ಯಭಾರತಮಹಾಭಾರತಧರ್ಮಾಚಾರ್ಯಾಜಾನಂತಿ ಜಾಹವಿ ಗಾರ್ಗ್ಯ ಗೌತಮಶಾಕಲ್ಯ ಬಾಭ್ರವ್ಯಮಾಂಡವ್ಯಮಾಂಡೂ ಕೇಯಾ ಗಾರ್ಗೀವಾಚಕ್ನವೀ ವಡವಾಪ್ರಾತೀಥೇಯೀಸುಲಭಾಮೈತ್ರೇಯೀ ಕಹೋಳಂಕೌಷೀತಕಂ ಮಹಾಕೌಷೀತಕಂ ಪೈಂಗ್ಯಂ ಮಹಾಪೈಂಗ್ಯಂಸುಯಜ್ಞಂ ಸಾಂಖ್ಯಾಯನ ಮೈತರೇಯಂ ಮಹೈತರೇಯಂಶಾಕಲಂಬಾಷ್ಕಲಂಸುಜಾತ ವಕ್ತ್ರಮೌದವಾಹಿಂ ಮಹೌದವಾಹಿಂ ಸೌಜಾಮಿಂಶೌನಕಮಾಶ್ವಲಾಯನಂ ಯೇಚಾನ್ಯೇ ಆಚಾರ್ಯಾಸ್ತೇ ಸರ್ವೇ ತೃಪ್ಯಂತ್ವಿತಿ ॥ ಆಶ್ವಲಾಯನಗೃಹ್ಯಸೂತ್ರ, ಅಧ್ಯಾಯ-೩.]

ಓಂ ಸುಮಂತುಜೈಮಿನಿ ವೈಶಂಪಾಯನಪೈಲಸೂತ್ರಭಾಷ್ಯಭಾರತ ಮಹಾಭಾರತಧರ್ಮಾಚಾರ್ಯಾಸ್ತೃಪ್ಯಂತು । ಜಾನಂತಿಬಾಹವಿ ಗಾರ್ಗ್ಯಗೌತಮ ಶಾಕಲ್ಯ ಬಾಭ್ರವ್ಯ ಮಾಂಡವ್ಯಮಾಂಡೂಕೇಯಾಸ್ತೃಪ್ಯಂತು । ಗಾರ್ಗೀ ವಾಚಕ್ನವೀತೃಪ್ಯತು। ವಡವಾಪ್ರಾತೀಥೇಯೀತೃಪ್ಯತು । ಸುಲಭಾಮೈತ್ರೇಯೀ ತೃಪ್ಯತು । ಕಹೋಳಂ ತರ್ಪಯಾಮಿ । ಕೌಷೀತಕಂ ತರ್ಪಯಾಮಿ । ಮಹಾಕೌಷೀತಕಂ ತರ್ಪಯಾಮಿ । [ಭರದ್ವಾಜಂ ತರ್ಪಯಾಮಿ।] ಪೈಂಗ್ಯಂ ತರ್ಪಯಾಮಿ। ಮಹಾಪೈಂಗ್ಯಂ ತರ್ಪಯಾಮಿ । ಸುಯಜ್ಞಂ ತರ್ಪಯಾಮಿ । ಸಾಂಖ್ಯಾಯನಂ ತರ್ಪಯಾಮಿ । ಐತರೇಯಂ ತರ್ಪಯಾಮಿ। ಮಹೈತರೇಯಂ ತರ್ಪಯಾಮಿ। ಶಾಕಲಂ ತರ್ಪಯಾಮಿ । ಬಾಷ್ಕಲಂ ತರ್ಪಯಾಮಿ। ಸುಜಾತವಕ್ತ್ರಂ ತರ್ಪಯಾಮಿ । ಔದವಾಹಿಂ ತರ್ಪಯಾಮಿ। ಮಹೌದವಾಹಿಂ ತರ್ಪಯಾಮಿ। ಸೌಜಾಮಿಂ ತರ್ಪಯಾಮಿ । ಶೌನಕಂ ತರ್ಪಯಾಮಿ । ಆಶ್ವಲಾಯನಂ ತರ್ಪಯಾಮಿ । ಯೇಚಾನ್ಯೇ ಆಚಾರ್ಯಾಸ್ತೇ ಸರ್ವೇ ತೃಪ್ಯಂತು ॥

**೩. ಪಿತೃತರ್ಪಣ :** ದಕ್ಷಿಣಾಭಿಮುಖವಾಗಿ, ಪ್ರಾಚೀನಾವೀತಿಯಾಗಿ [ಜನಿವಾರವನ್ನು ಎಡಕ್ಕೆ ಹಾಕಿಕೊಂಡು] , ಪಿತೃತೀರ್ಥದಿಂದ , [ ಎಡಗಾಲನ್ನು ಹಿಂದೆ ಮಡಚಿ ಬಲಗಾಲಿನ, ಮಂಡಿಯೊಳಗೆ ಕೈ ಇರುವಂತೆ ] ನೀಡಬೇಕು. ತಿಲತರ್ಪಣ ನೀಡಿದರೇ, ರಾತ್ರಿ ಭೋಜನ ನಿಷಿದ್ಧವಾದ್ದರಿಂದ ನಿತ್ಯತಿಲ ತರ್ಪಣದ ಬದಲು ಬ್ರಹ್ಮಯಜ್ಞಾಂಗ ದ್ವಾದಶಪಿತೃಗಳಿಗೆ ಜಲತರ್ಪಣ ನೀಡುವುದು ಹೆಚ್ಚು ಆಚರಣೆಯಲ್ಲಿದೆ. ನಿತ್ಯ ತಿಲತರ್ಪಣ ನೀಡುವವರು ತರ್ಪಣವಿಧಿಯನ್ನು ಷಣ್ಣವತಿಶ್ರಾದ್ಧದಲ್ಲಿ ನೋಡಬೇಕು. ಋಗ್ವೇದಿಗಳಿಗೆ ಹೆಸರು, ಗೋತ್ರ, ರೂಪ ಕ್ರಮ. ಯಜುರ್ವೇದಿಗಳಿಗೆ ಗೋತ್ರ, ಹೆಸರು, ರೂಪ ಕ್ರಮ. ಮೂರು ಬಾರಿ ತರ್ಪಣ.

ಬ್ರಹ್ಮಯಜ್ಞಾಂಗ ದ್ವಾದಶ ಪಿತೃತರ್ಪಣ [ ಪಿತೃವರ್ಗದ ಆರು ಜನ ]

೧. ಸಪತ್ನೀಕಷಟ್ಪಿತೃಃ ................................................................ ಶರ್ಮಾಣಂ [ತಂದೆಯಹೆಸರು] , ....................................ಗೋತ್ರಂ[ಗೋತ್ರ] ವಸುರೂಪಂ ತದಂತರ್ಯಾಮಿ ಭಾರತೀರಮಣಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾನಮಃ ತರ್ಪಯಾಮಿ, ತರ್ಪಯಾಮಿ, ತರ್ಪಯಾಮಿ.

೨. ಸಪತ್ನೀಕಷಟ್ಪಿತಾಮಹಂ : ........................................................ ಶರ್ಮಾಣಂ[ತಾತನ[ತಂದೆಯ ತಂದೆ ಹೆಸರು] .................................... ....................ಗೋತ್ರಂ[ಗೋತ್ರ], ರುದ್ರರೂಪಂ ತದಂತರ್ಯಾಮಿಭಾರತೀ ರಮಣಮುಖ್ಯಪ್ರಾಣಾಂ ತರ್ಗತ ಸಂಕರ್ಷಣಂ ಸ್ವಧಾನಮಃ ತರ್ಪಯಾಮಿ, ತರ್ಪಯಾಮಿ, ತರ್ಪಯಾಮಿ.

೩. ಸಪತ್ನೀಕಷಟ್ಪ್ರಪಿತಾಮಹಂ:............................................... ..........................ಶರ್ಮಾಣಂ[ತಂದೆಯತಾತ[ಮುತ್ತಾತ]ಹೆಸರು] ..........................................ಗೋತ್ರಂ[ಗೋತ್ರ], ಆದಿತ್ಯರೂಪಂ ತದಂತರ್ಯಾಮಿ ಭಾರತೀರಮಣಮುಖ್ಯಪ್ರಾಣಾಂತರ್ಗತ ವಾಸುದೇವಂ ಸ್ವಧಾನಮಃ ತರ್ಪಯಾಮಿ, ತರ್ಪಯಾಮಿ, ತರ್ಪಯಾಮಿ.

[ ಮಾತೃವರ್ಗದ ಆರು ಜನ ]

೧. ಸಪತ್ನೀಕಮಾತಾಮಹಂ.................................................... ಶರ್ಮಾಣಂ[ತಾಯಿಯ ತಂದೆಯ ಹೆಸರು],........................., ..........................................ಗೋತ್ರಂ [ಗೋತ್ರ] ವಸುರೂಪಂ

ತದಂತರ್ಯಾಮಿ ಭಾರತೀರಮಣಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾನಮಃ ತರ್ಪಯಾಮಿ, ತರ್ಪಯಾಮಿ, ತರ್ಪಯಾಮಿ,

೨. ಸಪತ್ನೀಕ ಮಾತುಃಪಿತಾಮಹಂ ..................................................... ...........ಶರ್ಮಾಣಂ[ತಾಯಿಯ ತಾತನ ಹೆಸರು]...................................... ........ಗೋತ್ರಂ[ಗೋತ್ರ] ರುದ್ರರೂಪಂ ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಸಂಕರ್ಷಣಂ ಸ್ವಧಾನಮಃ ತರ್ಪಯಾಮಿ, ತರ್ಪಯಾಮಿ, ತರ್ಪಯಾಮಿ.

೩. ಸಪತ್ನೀಕ ಮಾತುಃಪ್ರಪಿತಾಮಹಂ:................................................ ಶರ್ಮಾಣಂ[ತಾಯಿಯ ಮುತ್ತಾತ ನಹೆಸರು]........................,............. ಗೋತ್ರಂ[ಗೋತ್ರ], ಆದಿತ್ಯರೂಪಂತದಂತರ್ಯಾಮಿ ಭಾರತೀರಮಣಮುಖ್ಯ ಪ್ರಾಣಾಂತರ್ಗತ ವಾಸುದೇವಂ ಸ್ವಧಾನಮಃ ತರ್ಪಯಾಮಿ, ತರ್ಪಯಾಮಿ, ತರ್ಪಯಾಮಿ.

ಕಾಯೇನವಾಚಾ ಮನಸೇಂದ್ರಿಯೈರ್ವಾ ಬುದ್ಧ್ಯಾತ್ಮನಾ ವಾನುಸೃತಸ್ವಭಾವಂ। ಕರೋಮಿ ಯದ್ಯತ್ಸಕಲಂ ಪರಸ್ಮೈ ನಾರಾಯಣಾಯೇತಿ ಸಮರ್ಪಯಾಮಿ ॥ ಅನೇನ ಬ್ರಹ್ಮಯಜ್ಞ ದೇವ ಋಷಿ ಪಿತೃ[ತಂದೆಯಿದ್ದವರು ಪಿತೃಶಬ್ದಬಿಟ್ಟು ದೇವಋಷಿಎಂದುಹೇಳಬೇಕು] ತರ್ಪಣೇನ ಭಾರತೀರಮಣಮುಖ್ಯ ಪ್ರಾಣಾಂತರ್ಗತ ಶ್ರೀಲಕ್ಷ್ಮೀಜನಾರ್ದನ ಪ್ರೀಯತಾಂ ॥ ಎಂದು ನೀರನ್ನು ಬಿಟ್ಟು ಆಚಮಿಸಿ, ನಾಮತ್ರಯ ಜಪಮಾಡಿ, ಪವಿತ್ರದ ಗಂಟನ್ನು ಬಿಚ್ಚಬೇಕು.

## ನೈಮಿತ್ತಿಕ ತರ್ಪಣ

**೯. ಶ್ರಾದ್ಧಾಂಗತರ್ಪಣ [ ಪರೇಽಹನಿ ] :** ಶ್ರಾದ್ಧದ ಮಾರನೇ ದಿನ ನೀಡುವಂತಹದ್ದು, ಆದರೆ ಶ್ರಾದ್ಧದ ದಿನವೇ ನೀಡುವ ಪದ್ಧತಿಯಿದೆ. ಶ್ರಾದ್ಧದ ಮಾರನೇ ದಿನ ತರ್ಪಣ ನೀಡುವುದು ಉತ್ತಮ. ಸೂರ್ಯೋದಯಕ್ಕೆ ಮುಂಚೆ ನಿರ್ಮಾಲ್ಯತೀರ್ಥದಿಂದ ಆಚಮನ, ಪ್ರಾಣಾಯಾಮ ಮಾಡಿ, ಪವಿತ್ರವನ್ನು ಧರಿಸಿ, ಸಂಕಲ್ಪಮಾಡಿ ತಂದೆಯ ಶ್ರಾದ್ಧದಲ್ಲಿ ಪಿತೃ, ಪಿತಾಮಹ, ಪ್ರಪಿತಾಮಹರಿಗೆ, ತಾಯಿಯ ಶ್ರಾದ್ಧದಲ್ಲಿ ಮಾತಾ, ಪಿತಾಮಹಿ, ಪ್ರಪಿತಾಮಹಿಗಳಿಗೆ ತರ್ಪಣ ನೀಡಿ , ಪುನಃ ಸ್ನಾನಮಾಡಿ ಪ್ರಾತಃಸಂಧ್ಯಾವಂದನಾದಿ ಮುಂದಿನ ದೇವತಾ ಕಾರ್ಯಗಳನ್ನು ನಡೆಸಬೇಕು.

ಆಚಮ್ಯ, ಪವಿತ್ರಂ ಧೃತ್ವಾ, ಪ್ರಾಣಾನಾಯಮ್ಯ, ಶ್ರೀ ಗೋವಿಂದ ಗೋವಿಂದ ಶ್ರೀವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಆದ್ಯಬ್ರಹ್ಮಣಃ ದ್ವಿತೀಯ ಪರಾರ್ಧೇ ಶ್ವೇತವರಾಹ ಕಲ್ಪೇ ವೈವಸ್ವತ ಮನ್ವಂತರೇ ಕಲಿಯುಗೇ ಪ್ರಥಮಪಾದೇ ಭರತವರ್ಷೇ ಭರತಖಂಡೇ ಜಂಬೂದ್ವೀಪೇ ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣೇತೀರೇ ಶಾಲಿವಾಹನಶಕೇ ಬೌದ್ಧಾವತಾರೇ ರಾಮಕ್ಷೇತ್ರೇ ಅಸ್ಮಿನ್ ವರ್ತಮಾನೇ ಚಾಂದ್ರಮಾನೇನ ............................ ಸಂವತ್ಸರೇ, ದಕ್ಷಿಣಾಯನೇ [ಉತ್ತರಾಯಣೇ] ................. ಋತೌ, ..............ಮಾಸೇ, ಶುಕ್ಲಪಕ್ಷೇ [ ಕೃಷ್ಣಪಕ್ಷೇ ] , .........ತಿಥೌ, ........... ವಾಸರಯುಕ್ತಾಯಾಂ ವಿಷ್ಣುನಕ್ಷತ್ರ, ವಿಷ್ಣುಯೋಗ, ವಿಷ್ಣುಕರಣ ಏವಂಗುಣ ವಿಶೇಷಣ ವಿಶಿಷ್ಟಾಯಾಂ ಪುಣ್ಯತಿಥೌ[ಇಲ್ಲಿಯವರೆಗೂ ಪೂರ್ವದಿಕ್ಕಿಗೆ ಮುಖಮಾಡಿ ಕುಳಿತಿರಬೇಕು] ನಂತರ ಪ್ರಾಚೀನಾವೀತಿ [ಜನಿವಾರವನ್ನು ಬಲಭುಜದಮೇಲೆ ಬರುವಂತೆ ಅಂದರೆ ಎಡಭುಜ ಬಿಟ್ಟಿರುವಂತೆ ಹಾಕಿಕೊಂಡು ] , ದಕ್ಷಿಣದಿಕ್ಕಿಗೆ ತಿರುಗಿ, ಎಡಗಾಲನ್ನು ಹಿಂದಕ್ಕೆ ಮಡಚಿ ಬಲಗಾಲನ್ನೂರಿ ಕುಳಿತುಕೊಳ್ಳುವುದು. [ ತೌಳವ ಪಾಠ – ಶ್ರೀಮನ್ಮಧ್ವಾಚಾರ್ಯಾಣಾಂಹೃತ್ಕಮಲಮಧ್ಯನಿವಾಸಿ ವಾಸುದೇವ ಸಂಕರ್ಷಣ ಪ್ರದ್ಯುಮ್ನಾನಿರುದ್ಧ ಚತುರ್ಮೂರ್ತ್ಯಾದ್ಯನಂತಾವತಾರಾತ್ಮಕ ಪಿತೃ, ಪಿತಾಮಹ, ಪ್ರಪಿತಾಮಹಾಂತರ್ಯಾಮಿ ಪ್ರದ್ಯುಮ್ನ, ಸಂಕರ್ಷಣ, ವಾಸುದೇವಾತ್ಮಕ ಶ್ರಾದ್ಧಸ್ವಾಮಿ ಶ್ರೀಲಕ್ಷ್ಮೀಜನಾರ್ದನ ಪ್ರೇರಣಯಾ ಶ್ರೀಲಕ್ಷ್ಮೀಜನಾರ್ದನ ಪ್ರೀತ್ಯರ್ಥಂ] ಪಿತೃ, ಪಿತಾಮಹ, ಪ್ರಪಿತಾಮಹಾಂತರ್ಯಾಮಿ ವಸುರುದ್ರಾದಿತ್ಯಾಂತರ್ಗತ ಮನುನಾಮಕ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಮಧ್ವವಲ್ಲಭ ಜನಾರ್ದನ ವಾಸುದೇವ ಪ್ರೇರಣಯಾ ಶ್ರೀಮಧ್ವವಲ್ಲಭ ಜನಾರ್ದನ ವಾಸುದೇವ ಪ್ರೀತ್ಯರ್ಥಂ ಅಸ್ಮತ್ ಪಿತುಃ [ತಂದೆಯ ಶ್ರಾದ್ಧದಲ್ಲಿ], [ ಮಾತುಃ –ತಾಯಿಯ ಶ್ರಾದ್ಧದಲ್ಲಿ] ೧.ಪ್ರತಿ ಸಾಂವತ್ಸರಿಕ ಶ್ರಾದ್ಧಾಂಗತಯಾ ಪರೇಽಹನಿ ಕರ್ತವ್ಯ ತರ್ಪಣಂ ಅಪಕೃಷ್ಯ ಸದ್ಯಃ ಕರಿಷ್ಯೇ। [ಶ್ರಾದ್ಧದ ದಿನದಂದೇ ತರ್ಪಣ ನೀಡುವಾಗ ಹೇಳುವುದು] ೨. ಪೂರ್ವೇದ್ಯುಃಕೃತ ಪ್ರತಿಸಾಂವತ್ಸರಿಕ ಶ್ರಾದ್ಧಾಂಗತಯಾ ತಿಲತರ್ಪಣಂ [ ೨. ಶ್ರಾದ್ಧದ ಮಾರನೇ ದಿನ ತರ್ಪಣ ನೀಡಬೇಕಾದಾಗ ] ಕರಿಷ್ಯೇ ಎಂದು ಸಂಕಲ್ಪ ಮಾಡಬೇಕು. ಪ್ರಾರ್ಥನಾ–

ಆಗಚ್ಛಂತು ಪಿತರಃ ದೇವತಾಭ್ಯಃ ಪಿತೃಭ್ಯಶ್ಚ ಮಹಾಯೋಗಿಭ್ಯ ಏವ ಚ
ನಮಃ ಸ್ವಧಾಯೈ ಸ್ವಾಹಾಯೈ ನಿತ್ಯಮೇವ ನಮೋನಮಃ ॥

[ತಂದೆಯ ಶ್ರಾದ್ಧದಲ್ಲಿ]

೧. ಅಸ್ಮತ್‌ಪಿತರಂ...........................................................
.ಶರ್ಮಾಣಂ............................................ಗೋತ್ರಂ, ವಸುರೂಪಂ ತದಂತರ್ಯಾಮಿ ಮನುನಾಮಕ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾನಮಃ ತರ್ಪಯಾಮಿ ತರ್ಪಯಾಮಿ, ತರ್ಪಯಾಮಿ.

೨. ಅಸ್ಮತ್‌ಪಿತಾಮಹಂ...............................................ಶರ್ಮಾಣಂ .............................................. ಗೋತ್ರಂ, ರುದ್ರರೂಪಂ ತದಂತರ್ಯಾಮಿ ಮನುನಾಮಕ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಸಂಕರ್ಷಣಂ ಸ್ವಧಾನಮಃ ತರ್ಪಯಾಮಿ, ತರ್ಪಯಾಮಿ, ತರ್ಪಯಾಮಿ.

೩. ಅಸ್ಮತ್‌ಪ್ರಪಿತಾಮಹಂ...........................................ಶರ್ಮಾಣಂ...... ...........................ಗೋತ್ರಂ, ಆದಿತ್ಯರೂಪಂ ತದಂತರ್ಯಾಮಿ ಮನುನಾಮಕ ಭಾರತೀರಮಣ ಮುಖ್ಯಪ್ರಾಣಾಂತರ್ಗತ ವಾಸುದೇವಂ ಸ್ವಧಾನಮಃ ತರ್ಪಯಾಮಿ, ತರ್ಪಯಾಮಿ, ತರ್ಪಯಾಮಿ.

{ ಜೀವಮಾನ ಪಿತಾ ಯಸ್ಯ ಮಾತಾ ಯದಿ ವಿಪದ್ಯತೇ । ಮಾತುಃ ಶ್ರಾದ್ಧಂ ಸುತಃ ಕುರ್ಯಾತ್ ನ ಕುರ್ಯಾತ್ ತಿಲತರ್ಪಣಂ ॥ ನ ಜೀವತ್ ಪಿತೃಕಃ ಕುರ್ಯಾತ್ ಶ್ರಾದ್ಧಾಂಗ ತಿಲತರ್ಪಣಂ । ಶ್ರಾದ್ಧಮಾತ್ರಂ ಪ್ರಕುರ್ವೀತ ತರ್ಪಣಂತು ಪಿತಾಚರೇತ್ ॥ ಎಂಬ ಪ್ರಮಾಣಾನುಸಾರ ತಾಯಿಯ ಮರಣವಾಗಿ ತಂದೆಯು ಬದುಕಿದ್ದಾಗ, ತಾಯಿಯ ಶ್ರಾದ್ಧವನ್ನು ಮಗನೇ ಮಾಡಬೇಕು, ತಿಲತರ್ಪಣವನ್ನು ಮಾಡಬಾರದು. ಯಾಕೆಂದರೆ ತಂದೆ ಬದುಕಿರುವವನಿಗೆ ತಿಲತರ್ಪಣವನ್ನು ನಿಷೇಧಿಸಲಾಗಿದೆ, ಆದ್ದರಿಂದ ಶ್ರಾದ್ಧವನ್ನು ಮಾತ್ರಮಾಡಬೇಕು, ಶ್ರಾದ್ಧಾಂಗ ತಿಲತರ್ಪಣವನ್ನು ಮಗನ ಬದಲು ತಂದೆಯೇ ಯಜಮಾನಸ್ಯ ಮಾತುಃ ಎಂಬ ಸಂಕಲ್ಪಾನುಸಾರ ನೀಡಬೇಕು]

[ತಾಯಿಯ ಶ್ರಾದ್ಧದಲ್ಲಿ]

೧. ಅಸ್ಮನ್ಮಾತರಂ[೨. ಯಜಮಾನಸ್ಯ ಮಾತುಃ] .................................. ...................................ದಾಂ .................................................. .........ಗೋತ್ರಾಂ, ವಸುರೂಪಾಂ ತದಂತರ್ಯಾಮಿ ಮನುನಾಮಕ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾನಮಃ ತರ್ಪಯಾಮಿ, ತರ್ಪಯಾಮಿ, ತರ್ಪಯಾಮಿ.

೨. ಅಸ್ಮತ್‌ಪಿತಾಮಹೀಂ [ಯಜಮಾನಸ್ಯ ಪಿತಾಮಹೀಂ] ........................
..............................................ದಾಂ..............................ಗೋತ್ರಾಂ, ರುದ್ರರೂಪಾಂ ತದಂತಯಾಮಿ ಮನುನಾಮಕಭಾರತೀರಮಣಮುಖ್ಯಪ್ರಾಣಾಂತರ್ಗತ ಸಂಕರ್ಷಣಂ ಸ್ವಧಾನಮಃ ತರ್ಪಯಾಮಿತರ್ಪಯಾಮಿ,ತರ್ಪಯಾಮಿ.

೩. ಅಸ್ಮತ್ ಪ್ರಪಿತಾಮಹೀಂ....................................................ದಾಂ... ..........................................ಗೋತ್ರಾಂ, ಆದಿತ್ಯರೂಪಾಂ ತದಂತರ್ಯಾಮಿ ಮನುನಾಮಕ ಭಾರತೀರಮಣ ಮುಖ್ಯಪ್ರಾಣಾಂತರ್ಗತ ವಾಸುದೇವಂ ಸ್ವಧಾನಮಃ ತರ್ಪಯಾಮಿ, ತರ್ಪಯಾಮಿ, ತರ್ಪಯಾಮಿ.

ಆಬ್ರಹ್ಮಸ್ತಂಬಪರ್ಯಂತಂ ದೇವರ್ಷೀ ಪಿತೃಮಾನವಾಃ । ತೃಪ್ಯಂತು ಪಿತರಃ ಸರ್ವೇ ಮಾತೃಮಾತಾಮಹಾದಯಃ ॥ ಅತೀತಕುಲಕೋಟೀನಾಂ ಸಪ್ತದ್ವೀಪ ನಿವಾಸಿನಾಂ । ಆಬ್ರಹ್ಮಭುವನಾಲ್ಲೋಕಂ ಇದಮಸ್ತು ತಿಲೋದಕಮ್ ॥ ಮಿಕ್ಕಎಳ್ಳನ್ನೆಲ್ಲಾ ತೆಗೆದುಕೊಂಡು ಪಿತೃತೀರ್ಥದಿಂದ ತರ್ಪಣ ನೀಡುವುದು.

ಯೇಕೇ ಚಾಸ್ಮತ್ಕುಲೇ ಜಾತಾ ಅಪುತ್ರಾ ಗೋತ್ರಿಣೋ ಮೃತಾಃ । ತೇ ಗೃಹ್ಣಂತು ಮಯಾ ದತ್ತಂ ಸೂತ್ರನಿಷ್ಪೀಡನೋದಕಮ್ ॥ ಎಂದು ಜನಿವಾರ ಮಾಲಾ ಕಾರವಾಗಿ ಹಾಕಿಕೊಂಡು ಜನಿವಾರದ ಮೇಲೆ ನೀರನ್ನು ಹಾಕಿ ಹಿಂಡುವುದು. ನಂತರಪೂರ್ವದಿಕ್ಕಿಗೆ ತಿರುಗಿ ಜನಿವಾರವನ್ನು ಬಲಕ್ಕೆಹಾಕಿಕೊಂಡು ಯಸ್ಯಸ್ಮೃತ್ಯಾ ಚ ನಾಮೋಕ್ತ್ಯಾತರ್ಪಣಕ್ರಿಯಾದಿಷು । ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಂ॥ ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಜನಾರ್ದನ । ಯತ್ಕೃತಂತು ಮಯಾದೇವ ಪರಿಪೂರ್ಣಂ ತದಸ್ತು ಮೇ ॥ ಅನೇನ ೧. ಅಪಕೃಷ್ಯ ಪ್ರತಿಸಾಂವತ್ಸರಿಕ ಶ್ರಾದ್ಧಾಂಗತಯಾ [ಯಜಮಾನಸ್ಯ ಮಾತುಃಶ್ರಾದ್ಧಾಂಗತಯಾಕೃತ] ಪರೇಽಹನಿ ಕರ್ತವ್ಯ ತರ್ಪಣಂ ಮಯಾಕೃತೇನ [೧. ಶ್ರಾದ್ಧದ ದಿನವೇ ತರ್ಪಣ ನೀಡಿದಾಗ] ೨. ಪೂರ್ವೇದ್ಯುಃ ಕೃತಪ್ರತಿಸಾಂವತ್ಸರಿಕ [ಯಜಮಾನಸ್ಯ ಮಾತುಃ ಶ್ರಾದ್ಧಾಂಗತಯಾ ಕೃತ] ತಿಲತರ್ಪಣೇನ [೨. ಶ್ರಾದ್ಧದ ಮಾರನೇದಿನ ತರ್ಪಣ ನೀಡಿದಾಗ ] ಮನುನಾಮಕ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಅನಿರುದ್ಧಪ್ರದ್ಯುಮ್ನ ಸಂಕರ್ಷಣ ವಾಸುದೇವ ಚತುರ್ಮೂರ್ತಿ ಶ್ರಾದ್ಧಸ್ವಾಮೀ ಶ್ರೀಮಧ್ವವಲ್ಲಭ ಜನಾರ್ದನ ವಾಸುದೇವಃ ಪ್ರೀಯತಾಂ ಪ್ರೀತೋ ವರದೋ ಭವತು ಶ್ರೀಕೃಷ್ಣಾರ್ಪಣಮಸ್ತು ॥ ಎಂದು ಶ್ರೀಕೃಷ್ಣಾರ್ಪಣ ಬಿಟ್ಟು ಮಧ್ಯೇ ಮಧ್ಯೇ

ಮಂತ್ರತಂತ್ರಸ್ವರವರ್ಣ ಲೋಪದೋಷ ಪ್ರಾಯಶ್ಚಿತ್ತಾರ್ಥಂ ನಾಮತ್ರಯ ಮಂತ್ರಜಪಂ ಕರಿಷ್ಯೇ । ಓಂ ಶ್ರೀಅಚ್ಯುತಾಯ ನಮಃ, ಓಂ ಶ್ರೀಅನಂತಾಯ ನಮಃ, ಓಂ ಶ್ರೀಗೋವಿಂದಾಯ ನಮಃ॥ ಓಂ ಶ್ರೀಅಚ್ಯುತಾಯ ನಮಃ ಓಂ ಶ್ರೀಅನಂತಾಯನಮಃ, ಓಂ ಶ್ರೀಗೋವಿಂದಾಯ ನಮಃ ॥ ಓಂ ಶ್ರೀಅಚ್ಯುತಾಯ ನಮಃ, ಓಂ ಶ್ರೀಅನಂತಾಯ ನಮಃ, ಓಂ ಶ್ರೀಗೋವಿಂದಾಯ ನಮಃ ॥ ಓಂ ಶ್ರೀಅಚ್ಯುತಾನಂತಗೋವಿಂದೇಭ್ಯೋನಮಃ॥
ಕಾಯೇನ ವಾಚಾ ಮನಸೇಂದ್ರಿಯೈರ್ವಾ ಬುದ್ಧ್ಯಾತ್ಮನಾ ವಾನುಸೃತಸ್ವಭಾವಮ್। ಕರೋಮಿ ಯದ್ಯತ್ಸಕಲಂ ಪರಸ್ಮೈ ಶ್ರೀಮನ್ನಾರಾಯಣಾಯೇತಿ ಸಮರ್ಪಯಾಮಿ ॥ ಪವಿತ್ರವನ್ನು ಬಿಚ್ಚಿ ಆಚಮನ ಮಾಡಿ ಅನೇನ ಪಿತೃತರ್ಪಣಾಂ ಸಂಪೂರ್ಣಂ ಶ್ರೀಕೃಷ್ಣಾರ್ಪಣಮಸ್ತು ॥

## ೧೦. ತೀರ್ಥಯಾತ್ರಾಂಗ ತರ್ಪಣ

ಸ್ನಾತ್ವಾ ನದೀಷು ಸರ್ವಾಸು ಪಿತೃದೇವಾಂಶ್ಚ ತರ್ಪಯೇತ್ । ತತ್ರತತ್ರ ಯಥಾವಿತ್ತಂ ಕುರ್ಯಾಚ್ಛ್ರಾದ್ಧಾದಿಕಂ ತಥಾ ॥ ತೀರ್ಥೇಷು ಬ್ರಾಹ್ಮಣಂ ನೈವ ಪರೀಕ್ಷೇತ್ ಕಥಂಚನ ॥ ಇತಿ ಮತ್ಸ್ಯಪುರಾಣೇ. ಮತ್ಸ್ಯಪುರಾಣದಲ್ಲಿ ನದೀಸ್ನಾನಾನಂತರ ಪಿತೃಗಳಿಗೂ, ದೇವತೆಗಳಿಗೂ ತರ್ಪಣವನ್ನು ನೀಡಬೇಕು, ಹಾಗೆಯೇ ತನ್ನ ಶಕ್ತ್ಯನುಸಾರ ಶ್ರಾದ್ಧವನ್ನೂ ಮಾಡಬೇಕು. ಎಂದಿಗೂ ತೀರ್ಥಕ್ಷೇತ್ರದಲ್ಲಿ ಶ್ರಾದ್ಧಾಂಗ ಬ್ರಾಹ್ಮಣಪರೀಕ್ಷೆ ಮಾಡಬಾರದು. [ ಇದರಿಂದ ಕಾಲಶ್ರಾದ್ಧಗಳಲ್ಲಿ ಪಾತ್ರಾಪಾತ್ರ ವಿಚಾರಮಾಡಿ ಬ್ರಾಹ್ಮಣರನ್ನು ಆಹ್ವಾನಿಸಬೇಕೆಂಬುದು ತಿಳಿಯುತ್ತದೆ. ] ತೀರ್ಥಯಾತ್ರಾಂಗ ತರ್ಪಣವು ೧. ತೀರ್ಥಸ್ನಾನಾಂಗ ತರ್ಪಣ [ ನದಿಸ್ನಾನಾಂಗ ತರ್ಪಣ] ೨. ತೀರ್ಥಶ್ರಾದ್ಧಾಂಗ ತರ್ಪಣ ಎಂದು ಎರಡುವಿಧ.

***೧. ತೀರ್ಥಸ್ನಾನಾಂಗತರ್ಪಣ :*** ತರ್ಪಣ ಕ್ರಮವು ನದೀ ಸ್ನಾನ ವಿಧಿಯಲ್ಲಿ ದ್ದಂತೆಯೇ. ಸ್ನಾನಾಂಗ ತರ್ಪಣದಲ್ಲಿ ಆಯಾ ನದೀಸ್ಮರಣೆಯೊಂದಿಗೆ ಅಧಿಕಾರವಿದ್ದವರು ದೇವ, ಋಷಿ, ಆಚಾರ್ಯ, ಪಿತೃತರ್ಪಣವನ್ನು ಭೂದೇವಾನ್ ತರ್ಪಯಾಮಿ। ಭುವಃ ದೇವಾನ್ ತರ್ಪಯಾಮಿ। ಸ್ವಃ ದೇವಾನ್.....ಇತ್ಯಾದಿ ಕ್ರಮದಿಂದ ನೀಡಬೇಕು.[ವಿವರಣೆ ಪುಟ ೩೨, ೩೩, ೩೪ ರಲ್ಲಿದ್ದಂತೆ ] .

*೨. ತೀರ್ಥಶ್ರಾದ್ಧಾಂಗತರ್ಪಣ :* ತೀರ್ಥಶ್ರಾದ್ಧವನ್ನು ಯಥಾಶಕ್ತಿ ಮಾಡಿದ ನಂತರ ಸರ್ವಪಿತೃಗಳಿಗೂ ಕ್ರಮವಾಗಿ ತರ್ಪಣವನ್ನು ನೀಡುವುದು. [ ಸರ್ವಪಿತೃ ತರ್ಪಣಪ್ರಯೋಗ ಪುಟ ೯೮ ರಲ್ಲಿದೆ ] ಇದಕ್ಕೂ ಶಕ್ಯವಿಲ್ಲದಿದ್ದರೆ, ಆಚಮನ, ಸಂಕಲ್ಪ ಮಾಡಿ, ಸಂಕ್ಷಿಪ್ತವಾಗಿ ಆಬ್ರಹ್ಮಸ್ತಂಬಪರ್ಯಂತಂ ದೇವರ್ಷೀ ಪಿತೃಮಾನವಾಃ । ತೃಪ್ಯಂತುಪಿತರಃ ಸರ್ವೇ ಮಾತೃಮಾತಾಮಹಾದಯಃ ॥ ಅತೀತಕುಲಕೋಟೀನಾಂ ಸಪ್ತದ್ವೀಪ ನಿವಾಸಿನಾಂ । ಆಬ್ರಹ್ಮಭುವನಾಲ್ಲೋಕಮ್ ಇದಮಸ್ತುತಿಲೋದಕಂ ॥ ಎಂದು ಎಳ್ಳಿನಿಂದ ಪಿತೃತೀರ್ಥದಿಂದ ತರ್ಪಣ ನೀಡುವುದು. ಎಳ್ಳಿನ ಅಭಾವವಿದ್ದರೆ ಅಯಮಸ್ತು ಜಲಾಂಜಲಿಃ ॥ ಎಂದು ನೀರಿನಿಂದಲೇ ತರ್ಪಣ ನೀಡುವುದು. ನಂತರ ಯೇಕೇ ಚಾಸ್ಮತ್ಕುಲೇ ಜಾತಾ ಅಪುತ್ರಾ ಗೋತ್ರಿಣೋಮೃತಾಃ । ತೇ ಗೃಹ್ಣಂತು ಮಯಾ ದತ್ತಂ ಸೂತ್ರನಿಷ್ಪೀಡನೋದಕಂ ॥ ಎಂದು ಜನಿವಾರ ಮಾಲಾಕಾರವಾಗಿ ಹಾಕಿಕೊಂಡು ಜನಿವಾರದ ಮೇಲೆ ನೀರನ್ನು ಹಾಕಿ ಹಿಂಡುವುದು.

*೧೧. ಸಮುದ್ರಸ್ನಾನಾಂಗ ತರ್ಪಣ : ಅಥ ಸಮುದ್ರಯಾತ್ರಾವಿಧಿಃ* ಮೊದಲ ದಿನ ಸಮುದ್ರಸ್ನಾನವಿಧಿ, ಎರಡನೇ ದಿನ ಶ್ರಾದ್ಧವಿಧಿ, ಮೂರನೇ ದಿನ ಯಥಾಶಕ್ತಿ ಜಪಹೋಮದಾನಾದಿಗಳು ಸಮುದ್ರಯಾತ್ರಾ ಪದ್ಧತಿಯಾಗಿದೆ. ಸಮುದ್ರಸ್ನಾನ ಕಾಲವನ್ನು ಸ್ಕಾಂಧಪುರಾಣದಲ್ಲಿ ಈ ರೀತಿ ಹೇಳಲಾಗಿದೆ – ಪರ್ವಕಾಲದಲ್ಲಿ ಸ್ನಾನಮಾಡುವುದರಿಂದ ಮತ್ತು ತರ್ಪಣಗಳಿಂದ ಸಮುದ್ರ ರಾಜನು ಎಲ್ಲರನ್ನೂ ಪವಿತ್ರೀಕರಿಸುತ್ತಾನೆ. ಪರ್ವಕಾಲ ಭಿನ್ನ ಕಾಲದಲ್ಲಿ ಎಂದೂ ಸಮುದ್ರಸ್ನಾನ ಮಾಡಬಾರದು, ಮಂತ್ರವಿಲ್ಲದೆ, ಪರ್ವಕಾಲವಿಲ್ಲದೆ, ಕ್ಷೌರಮಾಡಿಸಿಕೊಳ್ಳದೆ ಮನುಷ್ಯರು ದರ್ಭೆಯ ತುದಿಯಿಂದಲೂ ಸಹ ಸಮುದ್ರ ಸ್ಪರ್ಶವನ್ನು ಮಾಡಬಾರದು. ಅಶ್ವತ್ಥವೃಕ್ಷ ಮತ್ತು ಸಮುದ್ರವನ್ನು ಎಲ್ಲಾ ದಿನಗಳಲ್ಲಿ ಸೇವಿಸಬಾರದು, ಶನಿವಾರದಂದು ಅಶ್ವತ್ಥವೃಕ್ಷವನ್ನೂ, ಪರ್ವಕಾಲದಲ್ಲಿ ಸಮುದ್ರವನ್ನೂ ಸ್ಪರ್ಶಿಸಿ ಸೇವಿಸಬೇಕು. [ ತತ್ಸ್ನಾನಕಾಲ ಉಕ್ತಃ ಸ್ಕಾಂಧೇ – ಪುನಾತಿ ಪರ್ವಣಿ ಸ್ನಾನಾತ್ತರ್ಪಣೈ ಸರಿತಾಂಪತಿಃ । ಕದಾಚಿದಪಿ ನೈವಾತ್ರ ಸ್ನಾನಂ ಕುರ್ಯಾದಪರ್ವಣಿ ॥ ವಿನಾ ಮಂತ್ರಂ ವಿನಾ ಪರ್ವ ಕ್ಷುರಕರ್ಮ ವಿನಾ ನರೈಃ । ಕುಶಾಗ್ರೇಣಾಪಿ ತೀರ್ಥೇಶೋ ನ ಸ್ಪ್ರಷ್ಟವ್ಯೋ ಮಹೋದಧಿಃ ॥ ಭಾರತೇಽಪಿ – ಅಶ್ವತ್ಥಸಾಗರೌ ಸೇವ್ಯೌ ನ ಸ್ಪ್ರಷ್ಟವ್ಯೋ ಕದಾಚನ । ಅಶ್ವತ್ಥಂ ಮಂದವಾರೇ ತು ಸಾಗರಂ ಪರ್ವಣಿ ಸ್ಪೃಶೇತ್ ॥ ]

ಪರ್ವಕಾಲಗಳು – ಕೃಷ್ಣಪಕ್ಷದ ಅಷ್ಟಮಿ ಮತ್ತು ಚತುರ್ದಶಿ ತಿಥಿ, ಅಮಾವಾಸ್ಯೆ ಮತ್ತು ಸೂರ್ಯನ ಸಂಕ್ರಮಣಗಳು, ಹುಣ್ಣಿಮೆ ನಿತ್ಯ ಪರ್ವಕಾಲಗಳು, ನೈಮಿತ್ತಿಕ ಪರ್ವಕಾಲಗಳೆಂದರೆ ಸೂರ್ಯ, ಚಂದ್ರ ಗ್ರಹಣಗಳು ಮತ್ತು ಕೆಲವು ಸ್ಥಳಗಳನ್ನು ನಾವು ಸಮೀಪಿಸಿದಾಗ ನಿತ್ಯ ಪರ್ವಕಾಲವಲ್ಲದಿದ್ದರೂ ಸ್ನಾನಾದಿ ಕಾರ್ಯಗಳನ್ನು ಮಾಡಬೇಕೆಂದು ಪ್ರಭಾಸಖಂಡದಲ್ಲಿ [ಸ್ಕಾಂಧಪುರಾಣ] ಹೇಳಿದ್ದಾರೆ. ನದೀಸಂಗಮಕ್ಕೆ ನಾವು ಹೋದಾಗ ರಾಮೇಶ್ವರಕ್ಕೆ ಹೋದಾಗ ಇನ್ನೂ ಬೇರೆ ಬೇರೆ ತೀರ್ಥಕ್ಷೇತ್ರಗಳಲ್ಲಿ ನಾವು ತಲುಪಿದಾಗ ಸಮುದ್ರವನ್ನು ಪೂಜಿಸಿ ಸ್ನಾನ ಮಾಡಬೇಕು ಅಲ್ಲೆಲ್ಲಾ ಕಾಲ ನಿಯಮವಿರುವುದಿಲ್ಲವೆಂದು, ಹಾಗೂ ಪ್ರಾಯಶ್ಚಿತ್ತೇಂದು ಶೇಖರದಲ್ಲಿ ದೇವತಾ ಸಮೀಪದಲ್ಲಿರುವ ಸರೋವರದಲ್ಲಿ ಮತ್ತು ನದೀ ಸಂಗಮದಲ್ಲಿ ಸದಾ ಸ್ನಾನಮಾಡತಕ್ಕದ್ದು ಎಂದಿದೆ. ಅಲ್ಲಿಯೂ ಶುಕ್ರವಾರ ಮಂಗಳವಾರಗಳಲ್ಲಿ ಸ್ನಾನವನ್ನು ಬಿಡಬೇಕು. ಹಾಗೂ ಗ್ರಹಣಕಾಲ ರವಿವಾರಗಳಲ್ಲಿ ಸಂತಾನವನ್ನು ಇಚ್ಛಿಸುವವನು ಸ್ನಾನಮಾಡಬಾರದು. ಆದರೆ ಪರ್ವಕಾಲಗಳಲ್ಲಿ ಶುಕ್ರವಾರ, ಮಂಗಳವಾರಗಳಿದ್ದರೂ ಸ್ನಾನ ಮಾಡಬೇಕೆಂದು ತಿಳಿಯುತ್ತದೆ. [ ಪರ್ವಾಣಿ ತು – ಚತುರ್ದಶ್ಯಾಷ್ಟಮೀ ಕೃಷ್ಣಾ ಅಮಾವಾಸ್ಯಾ ಚ ಪೂರ್ಣಿಮಾ । ಪರ್ವಣ್ಯೇತಾನಿ ಚತ್ವಾರಿ ರವಿಸಂಕ್ರಮಣಂ ತಥಾ ॥ ಇತಿ, ಏತಾನಿ ನಿತ್ಯಾನಿ, ನೈಮಿತ್ತಿಕಾನಿ ತು ಗ್ರಹಣಾದೀನಿ, ಕ್ವಚಿತ್‌ಸ್ಥಲವಿಶೇಷೇಽಪ ವರ್ಣ್ಯಾಪಿ ಸ್ನಾನಮುಕ್ತಂ ಪ್ರಭಾಸಖಂಡೇ – ಪರ್ವಕಾಲೇ ಚ ಸಂಪ್ರಾಪ್ತೇ ನದೀನಾಂ ಚ ಸಮಾಗಮೇ । ಸೇತುಬಂಧೇ ತಥಾ ಸಿಂಧೌ ತೀರ್ಥೇಷ್ವನ್ಯೇಷು ಸಂಯುತಃ ॥ ಏವಮಾದಿಷು ತೀರ್ಥೇಷು ಮೇಧ್ಯೋ ಭವತಿ ವಾರಿಧಿಃ । ನ ಕಾಲನಿಯಮಸ್ತತ್ರ ಸಮುದ್ರೇ ಸ್ನಾನಮಾಚರೇತ್ ॥ ದೇವತಾಸಮೀಪೇ ಸರಃ ಸರಿತ್ಸಂಗಮೇಷು ಸಮುದ್ರಸ್ನಾನಂ ಸದಾ ಕಾರ್ಯಮಿತಿ ಪ್ರಾಯಶ್ಚಿತ್ತೇಂದುಶೇಖರೇ। ತತ್ರಾಪಿ – ಭೃಗುಭೌಮದಿನೇ ಸ್ನಾನಂ ನಿತ್ಯಮೇವ ವಿವರ್ಜಯೇತ್। ಗ್ರಹಣೇ ರವಿವಾರೇ ಚ ಪುತ್ರೇಪ್ಸುರ್ನೈತದಾಚರೇತ್॥ ಇತಿ ಪುರಾಣ ವಚನಾದ್ಭೌಮಶುಕ್ರ ವಾಸರಯೋಃ ಸ್ನಾನಂ ನಿಷಿದ್ಧಂ । ಪರ್ವಣಿ ತು ಭೃಗುಭೌಮ ದಿನೇಽಪಿ ಸ್ನಾನಂ ಭವತ್ಯೇವೇತಿ ಗಮ್ಯತೇ । ಪರ್ವಕಾಲೇ ಚ ಸಂಪ್ರಾಪ್ತ ಇತಿ ಪೂರ್ವೋಕ್ತ ಬಲವತ್ತರವಚನಾತ್। ] ಬೇರೆ ಸ್ಥಳದಿಂದ [ಯಾತ್ರೆಗೆ] ಬಂದವರಿಗಿಂತ ಹೊರತಾಗಿ ಪರಶುರಾಮಕ್ಷೇತ್ರವಾಸಿಗಳಾದ ಎಲ್ಲರೂ ಸ್ನಾನಪಾನಾದಿಗಳಿಂದ ಸಮುದ್ರಸೇವನೆಯನ್ನು ಯಾವಾಗಲೂ ಮಾಡಬೇಕು. [ಪರಶುರಾಮಕ್ಷೇತ್ರೇ ತು

ಸರ್ವದೈವ ಸ್ನಾನಾದಿ ಕರ್ತವ್ಯಂ । ಅತ್ರ ನಿಯಾಮಿಕಾ ಸಹ್ಯಾದ್ರಿಖಂಡೇ ಪರಶುರಾಮೋಕ್ತಿಃ । ಸಾ ಚ – ಮತ್‌ಕ್ಷೇತ್ರವಾಸಿಭಿಃ ಸರ್ವೈರ್ನಾನ್ಯೈರ್ದೇಶಾಂತ ರಾಗತೈಃ । ತ್ವಂ ಸೇವ್ಯಃ ಸರ್ವದಾ ಸಿಂಧೋ ಸ್ನಾನಪಾನಾವಗಾಹನೈಃ ॥ ] .
ಸಮುದ್ರಸ್ಪರ್ಶ ಮಾಡಬಾರದೆನ್ನುವ ಬ್ರಾಹ್ಮಣಶಾಪ ಎಂಭತ್ತುನಾಲ್ಕು ಯೋಜನ ಪ್ರದೇಶದಲ್ಲಿ ವಾಸಿಸುವವರಿಗೆ ಇರುವುದಿಲ್ಲ. ಈ ಪರಶುರಾಮಕ್ಷೇತ್ರದಲ್ಲಿ ವಾಸ ಮಾಡುವ ಸರ್ವರೂ ನನ್ನ ಪ್ರಸಾದದಿಂದ ಯಾವಾಗಲೂ ಸಮುದ್ರಸ್ನಾನ ವಿಷಯದಲ್ಲಿ ಮುಕ್ತರು. [ ಯೇ ಶಾಪಾ ಬ್ರಾಹ್ಮಣೈಃ ಪೂರ್ವಮಸ್ಪೃಶ್ಯಾದ್ಯಾ ಮಹೋದಧೇಃ । ದತ್ತಾಸ್ತೇ ನ ಭವಿಷ್ಯಂತಿ ಚತುರಾಶೀತಿ ಯೋಜನೇ ॥ ಯೇಽತ್ರ ವಾಸಂ ಕರಿಷ್ಯಂತಿ ವರ್ಣಾಃ ಸಂಕರಜಾದಯಃ। ಮುಕ್ತಾ ಏವ ಭವಿಷ್ಯಂತಿ ಮತ್ಪ್ರಸಾದಾನ್ನಸಂಶಯಃ ॥ ಇತಿ ] ಸ್ಕಾಂಧಪುರಾಣ ಪ್ರಭಾಸಖಂಡದಲ್ಲಿ ಸಮುದ್ರಸ್ನಾನದ ಮಹಿಮೆಯನ್ನು ಹೀಗೆ ಹೇಳಿದ್ದಾರೆ – ಸಮುದ್ರ ದರ್ಶನ ಮಾಡಿದರೆ ಒಂದು ರಾತ್ರಿ ಮತ್ತು ಹಗಲು ಗಳಿಸಿದ ಪಾಪಪರಿಹಾರವಾಗುತ್ತದೆ. ಸಮುದ್ರಸ್ಪರ್ಶ ಮಾಡಿದರೆ ಮೂರು ದಿನದ ಪಾಪ [ಕಿಲ್ಬಿಷ] ಪರಿಹಾರವಾಗುತ್ತದೆ. ಸಮುದ್ರ ಜಲ ಪ್ರೋಕ್ಷಣೆಯಿಂದ ಏಳು ದಿನದ ಪಾಪಗಳನ್ನು ಭಗವಂತ ಪರಿಹರಿಸುತ್ತಾನೆ. ಪಾನದಿಂದ ಹದಿನೈದು ದಿನದ ಪಾಪ ಹಾಗೂ ಸಮುದ್ರ ಸ್ನಾನದಿಂದ ಒಂದು ತಿಂಗಳ ಪಾಪ ಪರಿಹಾರವಾಗುತ್ತದೆ. ಸಂಗಮಕ್ಷೇತ್ರದಲ್ಲಿ ಸ್ನಾನ ಮಾಡಿದಾಗ ಎಂಟುತಿಂಗಳ ಪಾಪಪರಿಹಾರವಾದರೆ, ಪರ್ವಕಾಲದಲ್ಲಿ ಸ್ನಾನಮಾಡುವುದರಿಂದ ಒಂದು ವರ್ಷದಲ್ಲಿ ಗಳಿಸಿದ ಪಾಪಪರಿಹಾರವಾಗುತ್ತದೆ. ಇನ್ನು ಸೂರ್ಯೋದಯಕ್ಕಿಂತ ಮುಂಚೆ ನಿತ್ಯದಲ್ಲಿ ಸಮುದ್ರಸ್ನಾನ ಮಾಡುವುದರಿಂದ ನಮ್ಮ ಹಿಂದಿನ ಹಾಗೂ ಮುಂದಿನ ಮೂರು ತಲೆಮಾರಿನ ಪಿತೃಗಳು ತೃಪ್ತರಾಗುತ್ತಾರೆ. ಇನ್ನು ಸೂರ್ಯಾಸ್ತ ಸಮಯದಲ್ಲಿ ನಿತ್ಯ ಸ್ನಾನಮಾಡಿದರೆ ವೇದಾಧ್ಯಯನ ಮಾಡಿದ ಬ್ರಾಹ್ಮಣನಿಗೆ ಕಪಿಲ ಗೋದಾನ ಮಾಡಿದ ಫಲವು ನಿಶ್ಚಿತವಾಗಿ ಒದಗಿ ಬರುತ್ತದೆ. [ ಸಮುದ್ರದರ್ಶನಾದಿ ಮಹಿಮೋಕ್ತಿಃ ಸ್ಕಂಧ ಪುರಾಣೇ ಸಹ್ಯಾದ್ರಿ ಖಂಡೇ – ಹನ್ಯಘಂ ದರ್ಶನಾದೇವ ಯದ್ದಿವಾರಾತ್ರ ಸಂಚಿತಂ । ಸ್ಪೃಷ್ಟಸ್ತ್ರಿರಾತ್ರಜಂ ಸಮ್ಯಕ್ಕಿಲ್ಬಿಷಂ ನಿರ್ದಹೇತ್ಸದಾ ॥ ಸಪ್ತಾಹೋ ರಾತ್ರಜಂ ಹಂತಿ ಪ್ರೋಕ್ಷಣಾದ್ಭಗವಾನಘಂ । ಪಾನೇನ ಪಕ್ಷಜಂ ಪಾಪಂ ಸ್ನಾನಾತ್‌ಪಕ್ಷದ್ವಯಸ್ಯ ಚ॥ಸಂಗಮೇ ಚ ತಥಾಽಷ್ಟಭ್ಯಾಂ ಪರ್ವಸ್ನಾನಾಚ್ಚ ವಾರ್ಷಿಕಂ। ಭಾನಾವನುದಿತೇನಿತ್ಯಂ ಯಃ ಸ್ನಾತಿ ಲವಣೋದಧೌ ॥ ಪೂರ್ವೋತ್ತರ ಭವಾಸ್ತೇನ ಪುರುಷಾಸ್ತರ್ಪಿತಾಸ್ತ್ರಯಃ ।

ದಿವಸಸ್ಯಾಂತಸಮಯೇ ಯಃ ಸ್ನಾತಿ ಲವಣೋದಧೌ ॥ ಕಪಿಲಾಯಾಃ ಫಲಂ ತಸ್ಯ ದತ್ತಾಯಾಃ ಶ್ರೋತ್ರಿಯೇ ಧ್ರುವಮ್ । ]

ವ್ಯತೀಪಾತಯೋಗದಲ್ಲಿ, ದಿನಚ್ಛಿದ್ರಸಮಯದಲ್ಲಿ, ದಕ್ಷಿಣಾಯನ, ಉತ್ತರಾಯಣಗಳಲ್ಲಿ, [ ಕರ್ಕಾಟಕ ಮತ್ತು ಮಕರ ಸಂಕ್ರಮಣಗಳಲ್ಲಿ ] ವಿಷು ಸಂಕ್ರಮಣ [ ತುಲಾ ಮತ್ತು ಮೇಷ ಸಂಕ್ರಮಣಗಳಲ್ಲಿ ] , ಯುಗಾದಿಗಳಲ್ಲಿ ಸಮುದ್ರಸ್ನಾನ ಮಾಡಿದರೆ ಸಕಲ ಪಾಪಗಳಿಂದ ನಿರ್ಮುಕ್ತನಾಗುತ್ತಾನೆ. [ ವ್ಯತೀಪಾತೇ ದಿನಚ್ಛಿದ್ರೇ ಅಯನೇ ವಿಷುವೇತಥಾ ॥ ಯುಗಾದೌ ತು ನರಃ ಸ್ನಾತ್ವಾ ವಿರಜಃ ಸ್ಯಾನ್ಮಹೋದಧೌ । ದಿನಚ್ಛಿದ್ರ ಲಕ್ಷಣಮಾಹ ದಾನಕಮಲಾ ಕರೇ– ಭೃಗುಃ – ದಿನಚ್ಛಿದ್ರಂತು ಕಥಿತಂ ತಿಥಿಕೃತ್ಯೋರ್ಘಟೀದ್ವಯಂ । ನಾಗವೇದ ಪಲೋಪೇತಂ ತದ್ಭೇತತ್ತ್ವಪಲೈರ್ಯುತಂ ॥ ಪಲೈಃ ಷೋಡಶಭಿರ್ಯುಕ್ತಂ ನಾಡಿಕಾತ್ರಿತಯಂ ಯುತೇಃ । ಛೇದಾದಿಸಮಯಃ ಪ್ರೋಕ್ತೋ ದಾನೇಽನಂತ ಫಲಪ್ರದಃ ॥ ಇತಿ, ಕೃತಿಃ ಕರಣಂ, ಯುತಿರ್ಯೋಗಃ, ತಿಥ್ಯಾದೀನಾಮಾದಾವಂತೇ ಚೋಕ್ತಕಾಲೋ ದಿನಚ್ಛಿದ್ರಮಿತಿ ತತ್ರೈವ ಪ್ರಪಂಚಿತಂ । ] **ಸಮುದ್ರೇ ತರ್ಪಣ ಫಲಮ್**–ಸಾಮುದ್ರೇಣ ಚ ತೋಯೇನ ಯತ್ತು ದೇವಾದಿತರ್ಪಣಂ । ಕ್ರಿಯತೇ ಯೇನ ಯೇಷಾಂ ಚ ತೇಷಾಂಸ್ಯಾದುತ್ತಮಾ ಗತಿಃ ॥ ಸಾಮುದ್ರೇಣ ಚ ತೋಯೇನ ಯತ್ರ ನಾದ್ಯಂ ಹತಂ ಪಯಃ । ತತ್ರಸ್ನಾತ್ವಾ ಚ ಪೀತ್ವಾ ಚ ಬ್ರಹ್ಮಹತ್ಯಾಂ ವ್ಯಪೋಹತಿ ॥ ಆಜನ್ಮಶತಸಾಹಸ್ರಂ ಯತ್ಪಾಪಂ ಸಮುಪಾರ್ಜಿತಂ । ಭಸ್ಮೀಭವತಿ ತತ್ಸರ್ವಂಕ್ಷಣಾತ್‌ಸ್ನಾನಾನ್ಮಹೋದಧೌ ॥ ಭಕ್ತ್ಯಾ ಯಃ ಕರ್ಣಮಾಧಾಯ ಶೃಣುಯಾದ್ ಘೋಷಮುತ್ತಮಂ । ಸಾಮುದ್ರಂ ಪಿತರಸ್ತಸ್ಯ ಮೋದಂತೇ ಸುಚಿರಂ ದಿವಿ ॥ ದೃಷ್ಟ್ವಾ ತದೂರ್ಮಿಸಂಘಾತಂ ಯಸ್ತು ತುಷ್ಯೇನ್ನಮೇನ್ನರಃ । ಯತ್ಕಾಸಾರೋಪ ಸಲಿಲಂ ಚಂದ್ರಲೋಕಮವಾಪ್ನುಯಾತ್ ॥ ಇತಿ ॥ ದರ್ಶನಪ್ರಕಾರಸ್ತತ್ರೈವ – ಆದೌ ದರ್ಶನಮನ್ವಿಚ್ಛನ್‌ಗೃಹ್ಣೀಯಾ ಚ್ಛ್ರೀಫಲಂ ಮುದಾ । ರತ್ನಂ ಪಂಚವಿಧಂ ಪುಷ್ಪಂ ತಾಂಬೂಲಂ ಚ ತರ್ಪಯೇತ್ ॥ ಅತ್ರ ಶ್ರೀಫಲ ಶಬ್ದೇನ ನಾರಿಕೇಳಫಲಂ ಗೃಹ್ಯತೇ । ಪ್ರಾರ್ಥನಾದಿಮಂತ್ರಾಂಸ್ತು ಪ್ರಯೋಗೇ ವಕ್ಷ್ಯಾಮಃ । ಅತ್ರಮುಂಡನೇ ವಿಶೇಷಃ – ವೃಷಭಸ್ತತ್ರ ದಾತವ್ಯಃ ಪ್ರವೃತ್ತೇ ಕ್ಷುರ ಕರ್ಮಣಿ । ಪ್ರಥಮಂ ಸ್ನಾತಿ ಯಃ ಸಿಂಧೌ ತಸ್ಯಾಯಮುದಿತೋ ವಿಧಿಃ ॥ ತತಃ ಪರಂ ಪೂರ್ವವಿಧಿರಬ್ಧೌ ಸ್ನಾನೇ ಪ್ರಕೀರ್ತಿತಃ । ಪೂರ್ವವಿಧಿಃ ಕ್ಷುರಕರ್ಮ ವಿನೇತ್ಯರ್ಥಃ । ಪೂರ್ವಸ್ಯಾಂ ದಿಶಿ ಸುಗ್ರೀವಂ ದಕ್ಷಿಣಸ್ಯಾಂ ನಲಂ

ಸ್ಮರೇತ್ । ಪ್ರತೀಚ್ಯಾಂ ಚ ಸ್ಮರೇನ್ಮೈಂದಮುದೀಚ್ಯಾಂ ಶರಭಂ ಸ್ಮರೇತ್ ॥ ರಾಮಂ ಚ ಸೀತಯಾ ಮಧ್ಯೇ ಲಕ್ಷ್ಮಣಂ ಚ ವಿಭೀಷಣಂ । ಅಂಗದಂ ಚ ಹನೂಮಂತಂ ಸ್ಮೃತ್ವಾ ಸ್ನಾಯಾನ್ ಮಹೋದಧೌ ॥ ಅತ್ರ ತರ್ಪಣಮುಕ್ತಂ ಸ್ಕಾಂಧೇ–ಪಿಪ್ಪಲಾದಂ ವಿಕಣ್ವಂ ಚ ಕೃತಾಂತಂ ಜೀವಕೇಶ್ವರಂ । ಮನ್ಯುಂ ಚ ಕಾಲರಾತ್ರಿಂ ಚ ನಿದ್ರಾಂ ಚಾಹರ್ಗಣೇಶ್ವರಂ ॥ ವಶಿಷ್ಠಂ ವಾಮದೇವಂ ಚ ಪರಾಶರಮುಮಾಪತಿಂ । ವಾಲ್ಮೀಕಿನಂ ನಾರದಂ ಚ ವಾಲಖಿಲ್ಯಾಂಸ್ತಥೈವ ಚ ॥ ನಲಂ ನೀಲಂ ಗವಾಕ್ಷಂ ಚ ಗವಯಂ ಗಂಧಮಾದನಂ । ಜಾಂಬವಂತಂ ಹನೂಮಂತಂ ಸುಗ್ರೀವಂ ಚಾಂಗದಂ ತಥಾ ॥ ಮೈಂದಂ ಚ ದ್ವಿವಿದಂ ಚೈವ ವೃಷಭಂ ಶರಭಂ ತಥಾ । ರಾಮಂ ಚ ಲಕ್ಷ್ಮಣಂ ಚೈವ ಸೀತಾಂ ಚೈವ ಯಶಸ್ವಿನೀಂ ॥ ಇತಿ, ಏತಾಃ ಸಂತರ್ಪ್ಯಚ ತಥಾ ಯಮತರ್ಪಣ ಮಾಚರೇತ್ । ಯಮಂ ಚ ಧರ್ಮರಾಜಂ ಚ ಮೃತ್ಯುಂ ಚೈವಾಂತಕಂ ತಥಾ ॥ ವೈವಸ್ವತಂ ಚ ಕಾಲಂ ಚ ಸರ್ವಭೂತಕ್ಷಯಂ ತಥಾ । ಔದುಂಬರಂ ಚ ದಧ್ನಂ ಚ ನೀಲಂ ಚ ಪರಮೇಷ್ಠಿನಂ ॥ ವೃಕೋದರಂ ಚ ಚಿತ್ರಂ ಚ ಚಿತ್ರಗುಪ್ತಂ ಚ ತರ್ಪಯೇತ್ ॥ ಇತಿ । ಸ್ನಾನೋತ್ತರಂ ಚ ಪೂಜನಮುಕ್ತಂ ಸಹ್ಯಾದ್ರಿಖಂಡೇ – ಪಶ್ಚಾತ್ತು ಸಾಗರಂ ಭಕ್ತ್ಯಾತ್ವಾವಾಹನಪುರಃಸರಂ। ಪೌರುಷೇಣಾಥಸೂಕ್ತೇನ ನಾಮ ಮಂತ್ರೇಣ ವಾ ಪುನಃ ॥ ಆಸನಂ ಚ ತಥಾ ಪಾದ್ಯಮರ್ಘ್ಯಮಾಚಮನಂ ತಥಾ। ಸ್ನಾನಂವಸ್ತ್ರಂ ತಥಾ ಯಜ್ಞೋಪವೀತಂ ಗಂಧಲೇಪನಂ ॥ ಪುಷ್ಪೈಶ್ಚ ವಿವಿಧೈರ್ನಾಗಚಂಪಕಾದ್ಯೈಃ ಪ್ರಪೂಜಯೇತ್ । ಧೂಪಂದೀಪಂ ಚ ನೈವೇದ್ಯಂ ಷಡ್ರಸೈಶ್ಚ ಸಮನ್ವಿತಂ ॥ ತಾಂಬೂಲಂ ದಕ್ಷಿಣಾದಾನಂ ನೀರಾಜನಮಥೋ ಪರಂ । ಪ್ರದಕ್ಷಿಣ ನಮಸ್ಕಾರಾಃ ಕರ್ತವ್ಯಾ ಭಕ್ತಿ ಭಾವತಃ ॥ ಮಂತ್ರೈರ್ವೇದೋದ್ಭವೈರ್ದೇಯಾ ಪುಷ್ಪಾಂಜಲಿರತಂದ್ರಿತಃ । ತತಸ್ತು ಬ್ರಾಹ್ಮಣಾನ್ಸಪ್ತ ಪೂಜಯೇದ್ಭಕ್ತಿಸಂಯುತಃ ॥ ತೇಭ್ಯಶ್ಚ ದಕ್ಷಿಣಾಂ ದದ್ಯಾದ್ಯಥಾವಿಭವಸಾರತಃ । ಅನ್ಯೇಭ್ಯೋ ದಕ್ಷಿಣಾಂ ದದ್ಯಾದ್ಬ್ರಾಹ್ಮಣೇಭ್ಯಶ್ಚ ಭೂಯಸೀಂ ॥ ಕರ್ಮಣಃ ಸಾಧುಗುಣ್ಯಾರ್ಥಂ ದೋಗ್ಧ್ರೀಂ ಧೇನುಂ ಸವತ್ಸಕಾಂ । ಸ್ವರ್ಣಶೃಂಗೀಂ ರೌಪ್ಯಖುರೀಮಾಚಾರ್ಯಾಯ ನಿವೇದಯೇತ್ ॥ ಪಿತೄಣಾಂ ತು ತತಃ ಕುರ್ಯಾಚ್ಛ್ರಾದ್ಧಂ ಚೈವ ಯಥಾವಿಧಿ।ಯಥಾ ಶ್ರಾದ್ಧಂ ಗಯಾಯಾಂ ತು ಮೋಕ್ಷದಂ ಸಾಗರೇತಥಾ ॥ ಪಿತೄಣಾಂ ಮೋಕ್ಷಕಾಮೋಽತ್ರ ಶ್ರಾದ್ಧಂ ಕುರ್ಯಾತ್ಪ್ರಯತ್ನತಃ । ಯಾತ್ರಾಯಾಃ ಫಲಮನ್ವಿಚ್ಛನ್ಬ್ರಾಹ್ಮಣಾನ್ಭೋಜಯೇ

ತ್ಸುಧೀಃ ॥ ದದ್ಯಾತ್ಸುವಾಸಿನೀಭ್ಯಶ್ಚ ಕಂಚುಕೀಕುಂಕುಮಾದಿಕಂ । ತೀರ್ಥೇ ಪ್ರಾಪ್ತಸ್ತು ಯೋ ವಿಪ್ರೋ ಬ್ರಹ್ಮಣಾಸದೃಶಃ ಕಿಲ ॥ ನ ಪರೀಕ್ಷೇದತೋ ವಿಪ್ರಾನ್ ಬ್ರಾಹ್ಮಣಾಸ್ತೀರ್ಥದಾ ಯತಃ।ಕ್ರೋಧಲೋಭೌ ತ್ಯಜೇದೇವಂ ವಿಧಿಸ್ತೀರ್ಥಸ್ಯ ಕೀರ್ತಿತಃ ॥ ಇತಿ. ಅಯಂ ವಿಧಿಸ್ತ್ರಿದಿನಸಾಧ್ಯಃ–ತದಾಹ ತತ್ರೈವ ಶೌನಕಃ– ಪ್ರಾಪ್ತೇಽಹ್ನಿ ವಪನಂ ಕುರ್ಯಾದುಪವಾಸಂ ಚ ಸಾಗರಂ । ಪೂಜಯೇ ತ್ವರಯಾ ಪ್ರೀತ್ಯಾ ದ್ವಿತೀಯೇ ಪಿತೃತರ್ಪಣಂ । ತೃತೀಯೇ ತೀರ್ಥದೇವಾನಾಂ ತೃಪ್ತಿದಂ ಕರ್ಮ ವೈ ಚರೇತ್ । ಇತಿ, ತರ್ಪಣಗ್ರಹಣಂ ಶ್ರಾದ್ಧಸ್ಯಾಪ್ಯುಪಲಕ್ಷಣಂ ಜ್ಞೇಯಂ।

**ಅತ್ರಪ್ರಯೋಗ:** ಅತ್ರಾಪಿ ಘೃತಶ್ರಾದ್ಧಾದಿ ಯಾತ್ರಾವಿಧಿಃ ಪೂರ್ವೋಕ್ತ ಏವ । ಪ್ರಾಪ್ತಿದಿನೇ ಯಾನಾದಿ ಪರಿತ್ಯಜ್ಯ ಪಾದಚಾರೀ ಹಸ್ತೇ ಪಂಚರತ್ನಾನಿ, ತಾಂಬೂಲಂ, ಪುಷ್ಪಾಣಿ, ನಾರಿಕೇಳಫಲಂ, ಗುಂಜಾಕ್ಷತಾದಿ ಗೃಹೀತ್ವಾ ಸಾಗರಂ ದೃಷ್ಟ್ವಾ ರತ್ನಾದಿ ಸಮರ್ಪ್ಯ ಸಾಷ್ಟಾಂಗಂ ಪ್ರಣಮೇತ್।

ಸಾಗರಃ ಸರ್ವತೀರ್ಥೇಶ ಸರ್ವದಾ ಹರಿವಲ್ಲಭ । ಸರ್ವಂ ಹರತು ಮೇ ಪಾಪಂ ತೀರ್ಥರಾಜ ನಮೋಽಸ್ತು ತೇ ॥೧॥ ನಮಸ್ತೇ ವಿಶ್ವಗುಪ್ತಾಯ ನಮೋ ವಿಷ್ಣೋ ಅಪಾಂ ಪತೇ । ನಮೋ ಜಲಧಿರೂಪಾಯ ನದೀನಾಂ ಪತಯೇ ನಮಃ ॥೨॥ ನಮಸ್ತೇ ಜಗದಾಧಾರ ಶಂಖಚಕ್ರಗದಾಧರ । ದೇವ ದೇಹಿ ಮಮಾನುಜ್ಞಾಂ ತವ ತೀರ್ಥ ನಿಷೇವಣೇ ॥೩॥

ತತೋ ಯಥಾಶಕ್ತಿ ಪ್ರಾಯಶ್ಚಿತ್ತಂ ವಪನಂ ದಂತಧಾವನಂ ಚ ಪೂರ್ವವತ್ಕೃತ್ವಾ ಸ್ನಾನಾರ್ಥಂ ಪೂರ್ವವನ್ಮಹಾಸಂಕಲ್ಪಂ ಕುರ್ಯಾತ್। ತದಶಕ್ತೌ ಸಂಕ್ಷೇಪತಃ ಕುರ್ಯಾತ್ । **ಯಥಾ –** ಅಸ್ಯ ಶ್ರೀಮನ್ಮಹಾಭಗವತಃ ಸಚ್ಚಿದಾನಂದ ರೂಪಸ್ಯ ಶ್ರೀಮದಾದಿನಾರಾಯಣಸ್ಯಾಚಿಂತ್ಯಾಪರಿಮಿತಶಕ್ತ್ಯಾಭ್ರಿಯ ಮಾಣಾನಾಂ ಮಹಾಜಲೌಘಮಧ್ಯೇ ಪರಿಭ್ರಮಮಾಣಾನಾಮನೇಕ ಕೋಟಿ ಬ್ರಹ್ಮಾಂಡಾನಾಮೇಕತಮೇಽಸ್ಮಿನ್ ಬ್ರಹ್ಮಾಂಡಕರಂಡೇ ಭೂರ್ಲೋಕೇ ಭೂಮಂಡಲೇ ಜಂಬೂದ್ವೀಪೇ ಭಾರತೇವರ್ಷೇ ಭರತಖಂಡೇ ದಂಡಕಾರಣ್ಯೇ ಭೂಮಧ್ಯರೇಖಾಯಾಃ ಪಶ್ಚಿಮದಿಗ್ಭಾಗೇ ಗೋದಾವರ್ಯಾ ದಕ್ಷಿಣದಿಗ್ಭಾಗೇ ಕಾವೇರ್ಯಾ ಉತ್ತರ ದಿಗ್ಭಾಗೇ ಸಹ್ಯಾದ್ರೇಃ ಪಶ್ಚಿಮ ದಿಗ್ಭಾಗೇ ಪಶ್ಚಿಮ ಮಹೋದಧೇಃ ಪೂರ್ವತೀರೇಽಸ್ಮಿನ್ ಶ್ರೀಪರಶುರಾಮನಿರ್ಮಿತೇ ಪುಣ್ಯಕ್ಷೇತ್ರೇ ಲವಣೋದಧಿ ಸನ್ನಿಧೌ ಶ್ರೀಮದನೇಕಕೋಟಿಬ್ರಹ್ಮಾಂಡಘಟನಾಯಾ ಸರೋಮ ವಿವರಸ್ಯ ವಿರಾಡ್ರೂಪಿಣೋಭಗವತೋಮಹಾಪುರುಷಸ್ಯ ಶೇಷಪರ್ಯಂಕಶಾಯಿನಃ

ಶ್ರೀವಿಷ್ಣೋರಾಜ್ಞಯಾಪ್ರವರ್ತಮಾನಸ್ಯ ಬ್ರಹ್ಮಣೋ ದ್ವಿತೀಯಪರಾರ್ಧೇ ಶ್ವೇತವರಾಹಕಲ್ಪೇ ವೈವಸ್ವತಮನ್ವಂತರೇಽಷ್ಟಾವಿಂಶತಿತಮೇ ಮಹಾಯುಗೇಽಸ್ಮಿನ್ ವರ್ತಮಾನೇ ಕಲಿಯುಗೇ ತತ್ಪ್ರಥಮಚರಣೇ ಬೌದ್ಧಾವತಾರೇ ಶಾಲಿವಾಹನಶಕೇ ..........................ನಾಮಸಂವತ್ಸರೇ, ಉತ್ತರಾಯಣೇ [ದಕ್ಷಿಣಾಯನೇ],............... ಋತೌ,......................ಮಾಸೇ, ಶುಕ್ಲ [ ಕೃಷ್ಣ] ಪಕ್ಷೇ, ..........................ಪುಣ್ಯತಿಥೌ ......................ವಾಸರೇ,............................. ನಕ್ಷತ್ರೇ, ..................ಯೋಗೇ, .........................ಕರಣೇ,..................ಸ್ಥೇ ಸೂರ್ಯೇ, ಏವಂಗುಣವಿಶೇಷಣ ವಿಶಿಷ್ಟಾಯಾಂ ಪುಣ್ಯಕಾಲೇ ........................ ಗೋತ್ರಸ್ಯ, .............ನಕ್ಷತ್ರೇ .................. .ರಾಶೌ ಜಾತಸ್ಯ ...................................ನಾಮಧೇಯಸ್ಯ ಮಮ ಇಹಜನ್ಮನಿ ಜನ್ಮಾಂತರೇ ಚ ನಾನಾಯೋನಿಷು ಜ್ಞಾನತೋಽಜ್ಞಾನತಶ್ಚ ಬಾಲ್ಯಕೌಮಾರ ಯೌವನವಾರ್ಧಕೇಷು ಜಾಗ್ರತ್ಸ್ವಪ್ನಸುಷುಪ್ತ್ಯವಸ್ಥಾಸು ಮನೋವಾಕ್ಕಾಯ ಕರ್ಮಭಿಃ ಕಾಮಕ್ರೋಧಲೋಭಮೋಹಮದಮಾತ್ಸರ್ಯೈಃ ಸ್ತ್ವಕ್‌ಚಕ್ಷುಃ ಶ್ರೋತ್ರಜಿಹ್ವಾಘ್ರಾಣವಾಕ್‌ಪಾಣಿಪಾದಪಾಯೂಪಸ್ಥೈಃ ಸಂಭಾವಿತಾನಾಂ ಪ್ರಕಾಶಕೃತಬ್ರಹ್ಮಹತ್ಯಾದಿ ಮಹಾಪಾತಕಾನಾಂ ರಹಸ್ಯಕೃತಾನಾಂ ಮಹಾಪಾತಕಾನಾಂ ಮಹಾಪಾತಕಸಮಪಾತಕಾನಾಂ ತತ್ಸಂಸರ್ಗ್ಯಾದ್ಯತಿಪಾತಕಾನಾಂ ಗೋವಧಾದಿಉಪಪಾತಕಾನಾಂ ಪಿಪೀಲಿಕಾವಧಾದಿ ಲಘುಪಾತಕಾನಾಂ ಮೃಗವಧಾದಿ ಸಂಕರೀಕರಣಾನಾಂ ಕೃಮಿಕೀಟವಧಾದಿಮಲಿನೀಕರಣಾನಾಂ ನಿಂದಿತ ಧನಧಾನ್ಯಜೀವನಾದ್ಯಪಾತ್ರೀಕರಣಾನಾಂ ಬ್ರಾಹ್ಮಣಪೀಡನಾನ್ಯ ಸ್ತ್ರೀಗಮನಾದಿ ಜಾತಿಭ್ರಂಶಕರಣಾನಾಂ ವಿಹಿತಕರ್ಮತ್ಯಾಗಾದಿ ಪ್ರಕೀರ್ಣಕಾಂತಾನಾಂ ಚ ಸಕೃತ್‌ಕೃತಾನಾಮಭ್ಯಸ್ತಾನಾಮತ್ಯಂತಚಿರಕಾಲ ನಿರಂತರಾಭ್ಯಸ್ತಾನಾಂ ಮಹಾಪಾತಕಾದೀನಾಂ ಪ್ರಕೀರ್ಣಕಾಂತಾನಾಂ ನವವಿಧಾನಾಂ ಬಹುವಿಧಾನಾಂ ಸರ್ವೇಷಾಂ ಪಾಪಾನಾಮಪನೋದಾರ್ಥಂ ಶ್ರೀಮನುನಾಮಕಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಮನ್ಮಹಾವಿಷ್ಣುಪ್ರೇರಣಯಾ ಶ್ರೀಮನ್ಮಹಾ ವಿಷ್ಣು ಪ್ರೀತ್ಯರ್ಥಂ ಸಮುದ್ರಸ್ನಾನ ಕಲ್ಪೋಕ್ತಫಲಾವಾಪ್ತಯೇಽಸ್ಮಿನ್ ಕ್ಷಾರಮಹೋದಧೌ ಸ್ನಾನಮಹಂ ಕರಿಷ್ಯ ಇತಿ ಸಂಕಲ್ಪ್ಯ ತೀರಸ್ಥಪಾಷಾಣಮಾಚಾರಾದ್ವಾಲುಕಾ ಪಿಂಡಂ ಚ ಗೃಹೀತ್ವಾ – ಪಿಪ್ಪಲಾದಸಮುತ್ಪನ್ನೇ ಕೃತ್ಯೇ ಲೋಕಭಯಂಕರೇ ।

ಪಾಷಾಣಂ ತೇ ಮಯಾ ದತ್ತಮಾಹಾರಾರ್ಥಂ ಪ್ರಕಲ್ಪ್ಯತಾಂ ॥ – ಇತಿ ಮನ್ತ್ರೇಣ ತಂ ಪಾಷಾಣಂ ವಾಲುಕ ಪಿಂಡ ಸಹಿತಂ ಕೃತ್ಯಾಯೈ ಸಮುದ್ರೇ ನಿಕ್ಷಿಪೇತ್ । ತತಃ ಪೂರ್ವೋಕ್ತಪ್ರಕಾರೇಣ ದಶವಿಧ ಸ್ನಾನಾನಿ ಕೃತ್ವಾ ಬದ್ಧಾಂಜಲಿಃ ಸಮುದ್ರಾಭಿಮುಖಸ್ತಿಷ್ಠನ್ ಪ್ರಾರ್ಥಯೇತ್ । ತ್ವಂ ರಾಜಾ ಸರ್ವತೀರ್ಥಾನಾಂ ತ್ವಮೇವ ಜಗತಃ ಪಿತಾ । ಯಾಚಿತಂ ದೇಹಿ ಮೇ ತೀರ್ಥಂ ಸರ್ವಪಾಪ್ಯೈಃ ಪ್ರಮುಚ್ಯತೇ ॥ ಓಂ ಸಾಗರಸ್ಸನನಿರ್ಘೋಷ ದಂಡಹಸ್ತಾ ಸುರಾಂತಕ । ಜಗತ್ ಸ್ರಷ್ಟರ್ಜಗನ್ಮರ್ದಿನ್ನಮಾಮಿ ತ್ವಾಂ ಸುರೇಶ್ವರ ॥ ತೀಕ್ಷ್ಣದಂಷ್ಟ್ರ ಮಹಾಕಾಯ ಕಲ್ಪಾಂತದಹನೋಪಮ । ಭೈರವಾಯ ನಮಸ್ತುಭ್ಯಮನುಜ್ಞಾಂ ದಾತುಮರ್ಹಸಿ। ವಿಶ್ವಾಚೀ ಚ ಘೃತಾಚೀ ಚ ವಿಶ್ವಯೋನೇ ವಿಶಾಂಪತೇ । ಸಾನ್ನಿಧ್ಯಂ ಕುರು ದೇವೇಶ ಸಾಗರೇ ಲವಣಾಂಭಸಿ ॥ ತ್ರಿತತ್ವಾತ್ಮಕಮೀಶಾನಂ ನಮೋ ವಿಷ್ಣುಮುಮಾಪತಿಂ । ಸಾನ್ನಿಧ್ಯಂ ಕುರು ಮೇ ದೇವ ಸಾಗರೇ ಲವಣಾಂಭಸಿ ॥ ಇತ್ಯುಕ್ತ್ವಾ ನಾಭಿಮಾತ್ರೇ ಜಲೇ ಸ್ಥಿತ್ವಾ ಓಂ ನಮೋ ದೇವದೇವಾಯ ಶಿತಿ ಕಂಠಾಯ ದಂಡಿನೇ । ರುದ್ರಾಯ ಚಾಪಹಸ್ತಾಯ ಚಕ್ರಿಣೇ ವೇಧಸೇ ನಮಃ ॥ ಸರಸ್ವತೀ ಚ ಸಾವಿತ್ರೀ ವೇದಮಾತಾ ಗರೀಯಸೀ । ಸನ್ನಿಧಾತ್ರೀ ಭವತ್ವತ್ರ ತೀರ್ಥೇ ಪಾಪಪ್ರಣಾಶಿನೀ ॥ ಓಂ ಪ್ರಪದ್ಯೇ ವರುಣಂ ದೇವಮಂಭಸಾಂ ಪತಿಮೂರ್ಜಿತಂ। ಯಾಚಿತಂ ದೇಹಿ ಮೇತೀರ್ಥಂ ಸರ್ವಪಾಪಾಪನುತ್ತಯೇ ॥ ಓಂ ಹಿರಣ್ಯಶೃಂಗಂ ವರುಣಂ ಪ್ರಪದ್ಯೇ ತೀರ್ಥಂ ಮೇದೇಹಿ ಯಾಚಿತಃ । ಯನ್ಮಯಾ ಭುಕ್ತಮಸಾಧೂನಾಂ ಪಾಪೇಭ್ಯಶ್ಚ ಪ್ರತಿಗ್ರಹಃ ॥ ಯನ್ಮೇ ಮನಸಾ ವಾಚಾ ಕರ್ಮಣಾ ವಾ ದುಷ್ಕೃತಂ ಕೃತಂ । ತನ್ನ ಇಂದ್ರೋ ವರುಣೋ ಬೃಹಸ್ಪತಿಃ ಸವಿತಾ ಚ ಪುನಂತು ಪುನಃ ಪುನಃ ॥ ನಮೋಽಗ್ನಯೇಽಪ್ಸುಮತೇ ನಮ ಇಂದ್ರಾಯ ನಮೋ ವರುಣಾಯ ನಮೋ ವಾರುಣ್ಯೈ ನಮೋಽಬ್ದ್ಯಃ ॥ ಯದಪಾಂ ಕ್ರೂರಂ ಯದಮೇಧ್ಯಂ ಯದಶಾಂತಂ ತದಪಗಚ್ಛತಾತ್। ಅತ್ಯಾಶನಾದತೀಪಾನಾದ್ಯಚ್ಚ ಉಗ್ರಾತ್ಪ್ರತಿಗ್ರಹಾತ್ ॥ ತನ್ನೋ ವರುಣೋ ರಾಜಾ ಪಾಣಿನಾ ಹ್ಯವಮರ್ಶತು । ಸೋಽಹಮಪಾಪೋ ವಿರಜೋ ನಿರ್ಮುಕ್ತೋ ಮುಕ್ತಕಿಲ್ಬಿಷಃ ॥ ಯಶ್ಚಾಪ್ಸು ವರುಣಃ ಸ ಪುನಾತ್ವಘಮರ್ಷಣಃ ॥ ಅಗ್ನಿಶ್ಚಯೋನಿರನಿಲಶ್ಚ ದೇಹೋ ರೇತೋಧಾವಿಷ್ಣುರಮೃತಸ್ಯ ನಾಭಿಃ । ಏತದ್ ಬ್ರುವನ್‌ಪಾಂಡವ ಸತ್ಯವಾಕ್ಯಂ ತತೋಽವಗಾಹೇತ ಪತಿಂ ನದೀನಾಂ ॥ ಇತಿ ಪಠಿತ್ವಾ ಪೂರ್ವಸ್ಯಾಂ ದಿಶಿ ಸುಗ್ರೀವಂ, ದಕ್ಷಿಣಸ್ಯಾಂ ನಲಂ, ಪ್ರತೀಚ್ಯಾಂ ಮೈಂದಂ,

ಉದೀಚ್ಯಾಂ ಶರಭಂ ಮಧ್ಯೇ ಶ್ರೀರಾಮಂ ಸೀತಾಂ ಲಕ್ಷ್ಮಣಮಂಗದಂ ವಿಭೀಷಣಂ ಹನೂಮಂತಂ ಚ ಸ್ಮೃತ್ವಾ ತ್ರಿವಾರಮವಗಾಹ್ಯ ಮಾರ್ಜನಾದಿ ಕೃತ್ವಾ ಪವಿತ್ರಮಂತ್ರಾನ್ ಪಠಿತ್ವಾsರ್ಘ್ಯಾಣಿ ದದ್ಯಾತ್। ಅವಗಾಹಸ್ನಾನಾಂಗವಾಗಿ ಓಂ ಆಪೋಹಿಷ್ಠೇತಿ ತೃಚಸ್ಯಸೂಕ್ತಸ್ಯ ಅಂಬರೀಷಃಸಿಂಧುದ್ವೀಪಋಷಿಃ ಆಪೋದೇವತಾ ಗಾಯತ್ರೀಛಂದಃ ಮಾರ್ಜನೇ ವಿನಿಯೋಗಃ ॥ ಓಂ ಆಪೋಹಿಷ್ಠಾ ಮಯೋಭುವಃ। ಓಂ ತಾನ ಊರ್ಜೇ ದಧಾತನ । ಓಂ ಮಹೇರಣಾಯ ಚಕ್ಷಸೇ । ಓಂ ಯೋವಶ್ಶಿವತಮೋರಸಃ । ಓಂ ತಸ್ಯ ಭಾಜಯತೇಹನಃ । ಓಂ ಉಶತೀರಿವ ಮಾತರಃ । ಓಂ ತಸ್ಮಾ ಅರಂಗ ಮಾಮವಃ । ಯಸ್ಯಕ್ಷಯಾಯ ಜಿನ್ವಥ । ಓಂ ಆಪೋಜನಯಥಾಚನಃ ಎಂದು ಶರೀರಕ್ಕೆ ಪ್ರೋಕ್ಷಿಸಿಕೊಂಡು ಉಸ್ಸಿರನ್ನು ಹಿಡಿದುನೀರಲ್ಲಿ ಮುಳುಗಿ ಓಂ ಋತಂಚೇತ್ಯಸ್ಯ ಮಂತ್ರಸ್ಯ ಅಘಮರ್ಷಣ ಋಷಿಃ ಭಾವವೃತ್ತೋ ದೇವತಾ ಅನುಷ್ಟುಪ್ ಛಂದಃ ಅಘಮರ್ಷಣೇ ವಿನಿಯೋಗಃ ॥ ಓಂ ಋತಂ ಚ ಸತ್ಯಂ ಚಾಭೀದ್ಧಾತ್ತಪ ಸೋsಧ್ಯಜಾಯತ । ತತೋ ರಾತ್ರ್ಯಜಾಯತ ತತಃ ಸಮುದ್ರೋ ಅರ್ಣವಃ । ಸಮುದ್ರಾದರ್ಣವಾದಧಿ ಸಂವತ್ಸರೋ ಅಜಾಯತ । ಅಹೋರಾತ್ರಾಣಿ ವಿದಧದ್ವಿಶ್ವಸ್ಯಮಿಷತೋ ವ ಶೀ । ಸೂರ್ಯಾಚಂದ್ರಮಸೌ ಧಾತಾ ಯಥಾಪೂರ್ವ ಮಕಲ್ಪಯತ್ । ದಿವಂ ಚ ಪೃಥಿವೀಂ ಚಾಂತರಿಕ್ಷಮಥೋಸ್ವಃ ಎಂದು ಅಘಮರ್ಷಣಸೂಕ್ತವನ್ನು ಜಪಿಸಬೇಕು. ನಂತರ ಬಲಗೈ ಮುಷ್ಟಿಮಾಡಿ ಹೆಬ್ಬೆರಳು ಹೊರಚಾಚಿರುವಂತೆ [ಶಂಖ ಮುದ್ರೆ] ಪುರುಷ ಸೂಕ್ತದಿಂದ ನೀರನ್ನು ಎತ್ತಿ ತಲೆಯಮೇಲೆ ಹಾಕಿಕೊಳ್ಳಬೇಕು. ಶಿಖೆಯನ್ನು ಕಟ್ಟಿ ಆಚಮನ ಮಾಡಿ, ನೀರಿನಿಂದಲೇದ್ವಾದಶನಾಮ ಧರಿಸಿ ಈ ಮುಂದಿನ ಮಂತ್ರಗಳಿಂದ ಅರ್ಘ್ಯ ನೀಡಬೇಕು – ಸರ್ವರತ್ನೋ ಭವಾನ್‌ಶ್ರೀಮಾನ್ ಸರ್ವರತ್ನಾಕರೋ ಯತಃ । ಸರ್ವರತ್ನಪ್ರಧಾನ ತ್ವಂ ಗೃಹಾಣಾರ್ಘ್ಯಂ ಮಹೋದಧೇ ॥೧॥ ಉದನ್ವನ್ ಸರ್ವತೀರ್ಥೇಶ ಸರ್ವದಾ ಹರಿವಲ್ಲಭ । ಇಷ್ಟಂ ಪ್ರಕುರು ಭಕ್ತಾನಾಂ ಗೃಹಾಣಾರ್ಘ್ಯಂ ನಮೋsಸ್ತು ತೇ ॥೨॥ ನಮಃ ಕಮಲನಾಭಾಯ ನಮಸ್ತೇ ಜಲಶಾಯಿನೇ । ನಮಸ್ತೇsಸ್ತು ಹೃಷೀಕೇಶ ಗೃಹಾಣಾರ್ಘ್ಯಂ ನಮೋಸ್ತುತೇ॥೩॥ ವಿಷ್ಣ್ವರ್ಘ್ಯ ನೀಡಿ ಏಹಿ ಸೂರ್ಯಸಹಸ್ರಾಂಶೋ ತೇಜೋರಾಶೇ ಜಗತ್ಪತೇ । ಅನುಕಂಪಯ ಮಾಂಭಕ್ತಂ ಗೃಹಾಣಾರ್ಘ್ಯಂ ನಮೋಸ್ತು ತೇ ॥೪॥ ಎಂದು ಸೂರ್ಯಾರ್ಘ್ಯವನ್ನು ನೀಡಬೇಕು.

## ಸಮುದ್ರಸ್ನಾನಾಂಗ ದೇವ, ಋಷಿ, ಪಿತೃತರ್ಪಣ

[ ತಂದೆ ಬದುಕಿರುವವನಿಗೆ [ಜೀವತ್ಪಿತೃಕನಿಗೆ] ತಿಲದಿಂದ ಪಿತೃತರ್ಪಣದಲ್ಲಿ ಅಧಿಕಾರವಿಲ್ಲ. [ ವ್ಯಾಸಃ – ನ ಜೀವತ್ಪಿತೃಕಃ ಕುರ್ಯಾತ್ತಿಲೈಃ • ಕೃಷ್ಣೈಃಷ್ಣ ತರ್ಪಣಂ । ] ಸ್ನಾನಾಂಗ ಭೂಪಿತೃನ್ ತರ್ಪಯಾಮಿ ಎಂಬ ಪಿತೃತರ್ಪಣದಲ್ಲಿ ಅಧಿಕಾರವಿದೆ. ಸ್ನಾನಾಂಗ ಶಿಖೋದಕ, ವಸ್ತ್ರನಿಷ್ಪೀಡನ, ಯಕ್ಷ್ಮತರ್ಪಣಾದಿಗಳಲ್ಲಿ ಅಧಿಕಾರವಿಲ್ಲ. ] ನಂತರ ನಾಭಿಮಾತ್ರ ಜಲದಲ್ಲಿ ನಿಂತು ಉಪವೀತಿಯಾಗಿ ದೇವ ತೀರ್ಥದಿಂದ ಅಕ್ಷತೆ ಸಹಿತವಾಗಿ ತರ್ಪಣವನ್ನು ಈ ಮುಂದಿನಂತೆ ನೀಡಬೇಕು–೧. ಪಿಪ್ಪಲಾದಂ ತರ್ಪಯಾಮಿ, ೨. ವಿಕಣ್ವಂ ತರ್ಪಯಾಮಿ, ೩. ಕೃತಾಂತಂ ತರ್ಪಯಾಮಿ, ೪. ಜೀವಕೇಶ್ವರಂ ತರ್ಪಯಾಮಿ, ೫. ಮನ್ಯುಂ ತರ್ಪಯಾಮಿ, ೬. ಕಾಲರಾತ್ರಿಂ ತರ್ಪಯಾಮಿ, ೭. ನಿದ್ರಾಂ ತರ್ಪಯಾಮಿ, ೮. ಅಹರ್ಗಣೇಶ್ವರಂ ತರ್ಪಯಾಮಿ, ೯. ವಶಿಷ್ಠಂ ತರ್ಪಯಾಮಿ, ೧೦. ವಾಮದೇವಂ ತರ್ಪಯಾಮಿ, ೧೧. ಪರಾಶರವ್ ತರ್ಪಯಾಮಿ, ೧೨.ಉಮಾಪತಿಂ ತರ್ಪಯಾಮಿ, ೧೩. ವಾಲ್ಮೀಕಿನಂ ತರ್ಪಯಾಮಿ, ೧೪. ನಾರದಂ ತರ್ಪಯಾಮಿ, ೧೫. ವಾಲಖಿಲ್ಯಾಂಸ್ತರ್ಪಯಾಮಿ, ೧೬. ನಲಂ ತರ್ಪಯಾಮಿ, ೧೭. ನೀಲಂ ತರ್ಪಯಾಮಿ, ೧೮. ಗವಾಕ್ಷಂ ತರ್ಪಯಾಮಿ, ೧೯. ಗವಯಂ ತರ್ಪಯಾಮಿ, ೨೦. ಗಂಧಮಾದನಂ ತರ್ಪಯಾಮಿ, ೨೧. ಜಾಂಬವಂತಂ ತರ್ಪಯಾಮಿ, ೨೨. ಹನೂಮಂತಂ ತರ್ಪಯಾಮಿ,೨೩. ಸುಗ್ರೀವಂ ತರ್ಪಯಾಮಿ, ೨೪. ಅಂಗದಂ ತರ್ಪಯಾಮಿ, ೨೫. ಮೈಂದಂ ತರ್ಪಯಾಮಿ, ೨೬. ದ್ವಿವಿದಂ ತರ್ಪಯಾಮಿ, ೨೭. ವೃಷಭಂ ತರ್ಪಯಾಮಿ, ೨೮. ಶರಭಂ ತರ್ಪಯಾಮಿ, ೨೯. ರಾಮಂತರ್ಪಯಾಮಿ, ೩೦. ಲಕ್ಷ್ಮಣಂ ತರ್ಪಯಾಮಿ, ೩೧. ಸೀತಾಂ ತರ್ಪಯಾಮಿ, ಅಥ ಯಮತರ್ಪಣಮ್– ೧. ಯಮಂ ತರ್ಪಯಾಮಿ, ೨. ಧರ್ಮರಾಜಂ ತರ್ಪಯಾಮಿ, ೩. ಮೃತ್ಯುಂ ತರ್ಪಯಾಮಿ, ೪. ಅಂತಕಂ ತರ್ಪಯಾಮಿ, ೫. ವೈವಸ್ವತಂ ತರ್ಪಯಾಮಿ, ೬. ಕಾಲಂ ತರ್ಪಯಾಮಿ, ೭. ಸರ್ವಭೂತ ಕ್ಷಯಕರಂ ತರ್ಪಯಾಮಿ. ೮. ಔದುಂಬರಂ ತರ್ಪಯಾಮಿ, ೯. ದಧ್ನಂ ತರ್ಪಯಾಮಿ ೧೦. ನೀಲಂ ತರ್ಪಯಾಮಿ, ೧೧. ಪರಮೇಷ್ಠಿನಂ ತರ್ಪಯಾಮಿ, ೧೨. ವೃಕೋದರಂ ತರ್ಪಯಾಮಿ, ೧೩. ಚಿತ್ರಂ ತರ್ಪಯಾಮಿ, ೧೪. ಚಿತ್ರಗುಪ್ತಂ ತರ್ಪಯಾಮಿ.

೧. **ದೇವತರ್ಪಣಕ್ರಮ** : ಉಪವೀತೀ [ಜನಿವಾರ ಬಲಕ್ಕಿರುವಂತೆ], ಪೂರ್ವದಿಕ್ಕು, ದೇವತೀರ್ಥದಿಂದ ಒಂದೊಂದು ಬೊಗಸೆ ನೀರು ೧. ಬ್ರಹ್ಮಾದಯೋ ಯೇ ದೇವಾಸ್ತಾಂದೇವಾಂಸ್ತರ್ಪಯಾಮಿ । ೨. ಭೂರ್ದೇವಾಂಸ್ತರ್ಪಯಾಮಿ। ೩.ಭುವರ್ದೇವಾಂಸ್ತರ್ಪಯಾಮಿ। ೪.ಸ್ವರ್ದೇವಾಂಸ್ತರ್ಪಯಾಮಿ। ೫.ಭೂರ್ಭುವಃಸ್ವರ್ದೇವಾಂಸ್ತರ್ಪಯಾಮಿ। ಎಂದು ದೇವತರ್ಪಣ ನೀಡಬೇಕು.

೨. **ಋಷಿತರ್ಪಣಕ್ರಮ** : ನಿವೀತೀ [ಜನಿವಾರ ಮಾಲಾಕಾರ], ಉತ್ತರದಿಕ್ಕು, ಋಷಿತೀರ್ಥದಿಂದ ಎರಡೆರಡುಬೊಗಸೆ ನೀರು ೧.ಕೃಷ್ಣದ್ವೈಪಾಯನಾದಯೋ ಯೇ ಋಷಯಃ ತಾನ್ ಋಷೀನ್ ತರ್ಪಯಾಮಿ। ೨. ಭೂಃ ಋಷೀನ್ ತರ್ಪಯಾಮಿ। ೩. ಭುವಃ ಋಷೀನ್ ತರ್ಪಯಾಮಿ । ೪. ಸ್ವಃ ಋಷೀನ್ ತರ್ಪಯಾಮಿ । ೫. ಭೂರ್ಭುವಃಸ್ವಃ ಋಷೀನ್ ತರ್ಪಯಾಮಿ ಎಂದು ತರ್ಪಣ ನೀಡಬೇಕು.

೩.**ಪಿತೃತರ್ಪಣ** ; ಪ್ರಾಚೀನಾವೀತಿ[ ಜನಿವಾರ ಎಡಕ್ಕಿರುವಂತೆ], ದಕ್ಷಿಣದಿಕ್ಕು, ಪಿತೃತೀರ್ಥದಿಂದ ಮೂರುಮೂರುಬೊಗಸೆ ನೀರು. ೧ಸೋಮಃಪಿತೃಮಾನ್ ಯಮೋಂಗಿರಸ್ವಾನಗ್ನಿಷ್ವಾತ್ತಾಃ ಕವ್ಯವಾಹನಾದಯೋ ಯೇಪಿತರಃ ತಾನ್ಪಿತೄಂಸ್ತರ್ಪಯಾಮಿ । ೨. ಭೂಃ ಪಿತೄಂಸ್ತರ್ಪಯಾಮಿ ।೩. ಭುವಃ ಪಿತೄಂಸ್ತರ್ಪಯಾಮಿ। ೪. ಸ್ವಃ ಪಿತೄಂಸ್ತರ್ಪಯಾಮಿ । ೫. ಭೂರ್ಭುವಃಸ್ವಃ ಪಿತೄಂಸ್ತರ್ಪಯಾಮಿ । ಎಂದು ತರ್ಪಣ ನೀಡಬೇಕು. ನಂತರ ಅಗ್ನಿದಗ್ಧಾಶ್ಚ ಯೇ ಜೀವಾಃ ಯೇಽಪ್ಯದಗ್ಧಾಃ ಕುಲೇಮಮ । ಭೂಮೌದತ್ತೇನ ತೋಯೇನ ತೃಪ್ತಾಯಾಂತು ಪರಾಂಗತಿಂ॥ ಎಂದು ದಡದಲ್ಲಿ ಒಂದುಬೊಗಸೆ ನೀರನ್ನು ನೀಡಬೇಕು.

೪. ***ಶಿಖೋದಕ*** : ಪ್ರಾಚೀನಾವೀತಿಯಾಗಿ ಬಲಹೆಗಲಿನಮೇಲಿನಿಂದ ಶಿಖೆಯನೀರು ಬೀಳುವಂತೆ ಶಿಖೆಯನ್ನು ಈ ಮಂತ್ರದಿಂದ ಹಿಂಡಬೇಕು.– ಶಿಖೋದಕಂ ಭೂಪತಿತಂ ಪಿಬಂತಿ ಪಿತರೋಽಖಿಲಾಃ।ತಸ್ಮಾಚ್ಛಿಖೋದಕಂ ದದ್ಯಾತ್ ಪಿತೄಣಾಂ ತೃಪ್ತಿಹೇತವೇ॥ ಆರ್ಯಮಾದ್ಯಾಃ ಪಿತೃಗಣಾಃ ಪಕ್ಷಿರಾಜಕೃಪಾಲಯಾಃ। ತೇ ಗೃಹ್ಣಂತು ಮಯಾದತ್ತಂ ಶಿಖಾಸ್ಥಮಮ್ಬುತೋದಕಂ॥ ಲತಾಗುಲ್ಮೇಷುವೃಕ್ಷೇಷು ಯೇ ಜಾತಾಃ ಪಿತರೋಽಖಿಲಾಃ । ತೇಷಾಂ ತುಷ್ಟ್ಯರ್ಥಂ ವಿಸೃಜೇ ಶಿಖೋದಕಮಿದಂ ಭುವಿ ॥

**೫. ವಸ್ತ್ರನಿಷ್ಪೀಡನೋದಕ :** ನಿವೀತೀಯಾಗಿ, ಉತ್ತರೀಯ ವಸ್ತ್ರವನ್ನು [ಯಜುರ್ವೇದಿಗಳು ಸ್ನಾನಕಾಲದಲ್ಲಿ ಸೊಂಟಕ್ಕೆ ಕಟ್ಟಿದ್ದು, ಋಗ್ವೇದಿಗಳು ಮುಂಗೈಮೇಲೆ ಇಟ್ಟಿದ್ದು] ನಾಲ್ಕು ಮಡಿಕೆಯಾಗಿ ಮಡಿಸಿ–ಯೇ ಕೇ ಚಾಸ್ಮತ್ಕುಲೇ ಜಾತಾ ಅಪುತ್ರಾ ಗೋತ್ರಿಣೋ ಮೃತಾಃ । ತೇ ಗೃಹ್ಣಂತು ಮಯಾ ದತ್ತಂ ವಸ್ತ್ರನಿಷ್ಪೀಡನೋದಕಂ ಎಂದು ವಸ್ತ್ರವನ್ನು ಹಿಂಡಬೇಕು.

**೬. ಯಕ್ಷ್ಮತರ್ಪಣ :** ಉಪವೀತಿಯಾಗಿ, ದಡದಲ್ಲಿ, ಯನ್ಮಯಾದೂಷಿತಂ ತೋಯಂ ಶಾರೀರಮಲಸಂಭವಂ। ತಸ್ಯ ಪಾಪವಿಶುದ್ಧ್ಯರ್ಥಂ ಯಕ್ಷ್ಮಾಣಂ ತರ್ಪಯಾಮ್ಯಹಂ।। ಎಂದು ಒಂದು ಬೊಗಸೆ ನೀರುಬಿಡಬೇಕು.

ಆಬ್ರಹ್ಮಸ್ತಂಬಪರ್ಯಂತಂ ಯತ್ಕಿಂಚಿತ್ಸಚರಾಚರಮ್। ಮಯಾ ದತ್ತೇನ ತೋಯೇನತೃಪ್ತಿಮೇವಾಭಿಗಚ್ಛತು ।। ಎಂದು ಒಂದುಬೊಗಸೆ ನೀರನ್ನು ಬಿಡಬೇಕು.

ಜ್ಞಾನತೋಽಜ್ಞಾನತೋವಾಽಪಿ ಯನ್ಮಯಾ ದುಷ್ಕೃತಂ ಕೃತಮ್। ತತ್ ಕ್ಷಮಸ್ವಾಖಿಲಂ ದೇವ ತೀರ್ಥರಾಜ ನಮೋಽಸ್ತು ತೇ।। ಎಂದು ಕ್ಷಮಾಪಣೆಯನ್ನು ಬೇಡಿ, ಪುರುಷಸೂಕ್ತದಿಂದ, ಅಥವಾ ಓಂ ನಮೋನಾರಾಯಣಾಯ ಇತ್ಯಾದಿ ನಾಮಮಂತ್ರಗಳಿಂದ ಸಾಗರವನ್ನು ಷೋಡಶೋಪಚಾರದಿಂದ ಪೂಜಿಸಬೇಕು. ಇವಿಷ್ಟು ಪ್ರಥಮ ದಿನದಲ್ಲಿ ಮಾಡತಕ್ಕದ್ದು.

ಎರಡನೇ ದಿನದಲ್ಲಿ ಸ್ನಾನಾದಿಗಳನ್ನು ಮಾಡಿ ಅಪರಾಹ್ಣದಲ್ಲಿ ತೀರ್ಥಶ್ರಾದ್ಧವಿಧಿಯಿಂದ ತೀರ್ಥಶ್ರಾದ್ಧವನ್ನು ಮಾಡಿ ಪಿತೃತರ್ಪಣಾದಿಗಳನ್ನು ನೀಡಬೇಕು. ಮೂರನೇ ದಿನದಲ್ಲಿ ಯಥಾಶಕ್ತಿ ಜಪಹೋಮದಾನಾದಿಗಳನ್ನೂ ಮಹಾಪೂಜೆಯನ್ನೂ ಏಳು ಬ್ರಾಹ್ಮಣರನ್ನೂ, ಏಳು ಸಾಗರಗಳನ್ನೂ ತೀರದಲ್ಲಿ ಧ್ಯಾನಿಸುತ್ತಾ ೧. ಓಂ ಲವಣಸಾಗರಾಯ ನಮಃ, ೨. ಓಂ ಇಕ್ಷುಸಾಗರಾಯನಮಃ, ೩. ಓಂ ಸುರಾಸಾಗರಾಯ ನಮಃ ೪. ಓಂ ಸರ್ಪಿಃ ಸಾಗರಾಯ ನಮಃ, ೫.ಓಂ ದಧಿಸಾಗರಾಯನಮಃ, ೬. ಓಂ ಕ್ಷೀರಸಾಗರಾಯ ನಮಃ, ೭.ಓಂ ಸ್ವಾದು ಸಾಗರಾಯನಮಃ ಎಂದು ಆಸನಾದಿ ಉಪಚಾರಗಳಿಂದ ಪೂಜಿಸಿ, ವಸ್ತ್ರಾಭರಣಾದಿ ಗಳಿಂದ ಅಲಂಕರಿಸಿ ಯಥಾಶಕ್ತಿ ಸುವರ್ಣದಕ್ಷಿಣಾದಿಗಳನ್ನಿತ್ತು ಆಚಾರ್ಯರನ್ನು ಪೂಜಿಸಿ ಸಂಪೂರ್ಣಯಾತ್ರಾ ಫಲಪ್ರಾಪ್ತಿಗಾಗಿ ಕರುಸಹಿತವಾದ, ಹಾಲನ್ನು ನೀಡುವ, ಚಿನ್ನದ ತಗಡು ಕಟ್ಟಿದ ಕೊಂಬುಳ್ಳ, ಬೆಳ್ಳಿಯಿಂದ ಕಟ್ಟಲ್ಪಟ್ಟ ಗೊರಸುಳ್ಳ

ಚೆನ್ನಾಗಿ ಅಲಂಕರಿಸಲ್ಪಟ್ಟ ಗೋವನ್ನು ದಾನಮಾಡಬೇಕು. ಇದಕ್ಕೆ ಅಶಕ್ತನಾದರೇ ಯಥಾಶಕ್ತಿ ಪ್ರತಿನಿಧಿಗಾಗಿ ದಾನನೀಡಿ, ಬ್ರಾಹ್ಮರಿಗೆ ದಕ್ಷಿಣೆನೀಡಿ, ಭೂರಿ ಭೋಜನ ಮಾಡಿಸಬೇಕು. ಆಪತ್ತಿನಲ್ಲಿ ಮೂರುದಿನದ ಕಾರ್ಯವನ್ನೆಲ್ಲಾ ಒಂದೇ ದಿನದಲ್ಲಿ ಮಾಡಬಹುದು.

## ೧೨. ಯಮತರ್ಪಣ

ಶ್ರೀಸ್ಕಾಂದಪುರಾಣ ವೈಷ್ಣವ ಖಂಡ ಕಾರ್ತೀಕಮಾಸ ಮಹಾತ್ಮೆ/ ಒಂಭತ್ತನೆಯ ಅಧ್ಯಾಯ/ಶ್ಲೋಕ೨೭ರಿಂದ ೪೨ರಲ್ಲಿ ಯಮತರ್ಪಣದ ವಿವರಣೆ ಈ ಮುಂದಿನಂತಿದೆ. ಮುಖ್ಯವಾಗಿ ಯಮ ಮತ್ತು ಭೀಷ್ಮ ತರ್ಪಣವನ್ನು ತಂದೆ ಬದುಕಿರುವವರು ಸಹ ನೀಡಬೇಕೆಂದಿದೆ. ವಾಲಖಿಲ್ಯಾ ಊಚುಃ। ಪೂರ್ವವಿದ್ಧಚತುರ್ದಶ್ಯಾಂ ಆಶ್ವೀನಸ್ಯ ಸಿತೇತರೇ । ಪಕ್ಷೇಪ್ರತ್ಯೂಷಸಮಯೇ ಸ್ನಾನಂಕುರ್ಯಾತ್ ಪ್ರಯತ್ನತಃ ।। ಅರುಣೋದಯ ತೋಽನ್ಯತ್ರ ರಿಕ್ತಾಯಾಂ ಸ್ನಾತಿ ಯೋನರಃ । ತಸ್ಯಾಬ್ದಿಕಭವೋ ಧರ್ಮೋ ನಶ್ಯತ್ಯೇವ ನ ಸಂಶಯಃ ।। ತಥಾ ಕೃಷ್ಣಚತುರ್ದಶ್ಯಾಂ ಆಶ್ವಿನೇಽರ್ಕೋದಯೇ ಸುರಾಃ । ಯಾಮಿನ್ಯಾ ಪಶ್ಚಿಮೇ ಯಾಮೇ ತೈಲಾಭ್ಯಂಗೋ ವಿಶಿಷ್ಯತೇ ।। ಯದಾ ಚತುರ್ದಶೀ ನಸ್ಯಾತ್‌ದ್ವಿದಿನೇ ಚೇದ್ವಿಧೂದಯೇ । ದಿನದ್ವಯೇ ಭವೇಚ್ಚಾಽಪಿ ತದಾ ಪೂರ್ವೈವ ಗೃಹ್ಯತೇ।। ಬಲಾತ್ಕಾರದ್ಧಠಾದ್ವಾಽಪಿ ಶಿಷ್ಟಸ್ತ್ವಾನ್ನ ಕರೋತಿ ಚೇತ್ । ತೈಲಾಭ್ಯಂಗಂ ಚತುರ್ದಶ್ಯಾಂ ರೌರವಂ ನರಕಂ ವ್ರಜೇತ್।। ತೈಲೇಲಕ್ಷ್ಮೀರ್ಜಲೇಗಂಗಾ ದೀಪಾವಲ್ಯಾಶ್ಚತುರ್ದಶೀಂ । ಪ್ರಾತಃ ಸ್ನಾನಂ ಹಿ ಯಃ ಕುರ್ಯಾತ್ ಯಮಲೋಕಂ ನ ಪಶ್ಯತಿ।। ಅಪಾಮಾರ್ಗಮಥೋ ತುಂಬೀಂ ಪ್ರಪುನ್ನಾಡಮಥಾಽಪರಂ । ಭ್ರಾಮಯೇತ್ಸ್ನಾನ ಮಧ್ಯೇ ತು ನರಕಸ್ಯ ಕ್ಷಯಾಯವೈ ।। ವಾರತ್ರಯಂ ತ್ರಿವಾರಂ ಚ ಪಠಿತ್ವಾ ಮಂತ್ರಮುತ್ತಮಂ । **ಸೀತಾಲೋಕಸಮಾಯುಕ್ತ ಸಕಂಟಕದಲಾನ್ವಿತ ।। ಹರಪಾಪಮಪಾಮಾರ್ಗ ಭ್ರಾಮ್ಯಮಾಣ ಪುನಃ ಪುನಃ ।।** ಅಪಾಮಾರ್ಗಂ ತುಂಬೀಂ ಪ್ರಪುನ್ನಾಡಂ ಭ್ರಾಮಯೇಚ್ಛಿರಸೋಪರಿ । ಸ್ನಾತ್ವಾರ್ದ್ರವಾಸಸಾ ದದ್ಯಾತ್ ದೀಪಕಂ ಮೃತ್ಯು ಪುತ್ರಯೋಃ ।। ಶುನಕೌ ಶ್ಯಾಮಶಬಲೌ ಭ್ರಾತರೌ ಯಮಸೇವಕೌ । ತುಷ್ಟೌ ಸ್ಯಾತಾಂ ಚತುರ್ದಶ್ಯಾಂ ದೀಪದಾನೇನ ಮೃತ್ಯುಜೌ।। ಇಷ್ಟಬಂಧುಜನೈಃ ಸಾರ್ಧಂ ಏತತ್ಸ್ನಾನಂ ಸಮಾಚರೇತ್ । ಸ್ನಾನಾಂಗ ತರ್ಪಣಂ ಕೃತ್ವಾ ಯಮಂ ಸಂತರ್ಪಯೇತ್ತತಃ ।।

**ಯಮಾಯ ಧರ್ಮರಾಜಾಯ ಮೃತ್ಯವೇ ಚಾಂತಕಾಯ ಚ । ವೈವಸ್ವತಾಯ ಕಾಲಾಯ ಸರ್ವಭೂತ ಕ್ಷಯಾಯ ಚ॥ ಔದುಂಬರಾಯ ದಧ್ನಾಯ ನೀಲಾಯ ಪರಮೇಷ್ಠಿನೇ। ವೃಕೋದರಾಯ ಚಿತ್ರಾಯ ಚಿತ್ರಗುಪ್ತಾಯ ತೇ ನಮಃ ॥** ಚತುರ್ದಶೈತೇ ಮಂತ್ರಾಃ ಸ್ಯುಃ ಪ್ರತ್ಯೇಕಂ ಚ ನಮೋಽನ್ವಿತಾಃ । ಏಕೈಕೇನ ತಿಲೈರ್ಮಿಶ್ರಾನ್ ದದ್ಯಾತ್ತ್ರೀನುದಕಾಂಜಲೀನ್॥ **ಯಜ್ಞೋಪವೀತಿನಾ ಕಾರ್ಯಂ ಪ್ರಾಚೀನಾವೀತಿ ನಾಽಥ ವಾ। ದೇವತ್ವಂ ಚ ಪಿತೃತ್ವಂ ಚ ಯಮಸ್ಯಾಽಸ್ತಿ ದ್ವಿರೂಪತಾ॥ ಜೀವತ್‌ಪಿತಾಪಿ 'ಕುರ್ವೀತ ತರ್ಪಣಂ ಯಮಭೀಷ್ಮಯೋಃ ।**

ಅರ್ಥ – ವಾಲಖಿಲ್ಯರು ಹೇಳುತ್ತಾರೆ, ಆಶ್ವೀನಮಾಸದ ಕೃಷ್ಣಪಕ್ಷದಲ್ಲಿ ಹಿಂದಿನದಿನ ಆರಂಭವಾಗಿರುವ ಚತುರ್ದಶಿಯಂದು ಪ್ರಾತಃ ಕಾಲದಲ್ಲಿ ಪ್ರಯತ್ನಪೂರ್ವಕವಾಗಿ ಸ್ನಾನ ಮಾಡಬೇಕು. ಅರುಣೋದಯಕ್ಕೆ ಪೂರ್ವದಲ್ಲಿಯೇ ಸ್ನಾನ ಮಾಡಬೇಕು. ಅರುಣೋದಯಾನಂತರ ಶುಕ್ಲಪಕ್ಷದ ಚತುರ್ಥೀ, ನವಮೀ, ಚತುರ್ದಶಿ [ ರಿಕ್ತ ತಿಥಿ] ಯಂದು ಯಾರು ಸ್ನಾನ ಮಾಡುತ್ತಾರೋ ಅವರ ಒಂದು ವರ್ಷದೊಳಗಿನ ಪುಣ್ಯ ನಾಶವಾಗುತ್ತದೆಯೆಂಬುದರಲ್ಲಿ ಸಂಶಯವಿಲ್ಲ. ಇದೇ ರೀತಿ ಆಶ್ವೀನ ಕೃಷ್ಣಚತುರ್ದಶಿಯಂದು ಸೂರ್ಯೋದಯಾತ್ ಪೂರ್ವ ರಾತ್ರಿಯ ಕೊನೇಯಾಮದಲ್ಲಿ ತೈಲಾಭ್ಯಂಗನ ಮಾಡುವುದು ವಿಶೇಷ. ಚತುರ್ದಶಿತಿಥಿಯು ಎರಡು ದಿನಗಳಲ್ಲೂ ಚಂದ್ರೋದಯದಲ್ಲಿ ಇರುವುದಿಲ್ಲವೋ, ಅಥವಾ ಎರಡುದಿನದಲ್ಲೂ ವ್ಯಾಪ್ತವಿದ್ದರೇ ಮೊದಲನೆಯದನ್ನು ಗ್ರಹಿಸಬೇಕು. ಬಲಾತ್ಕಾರದಿಂದ, ಹಠದಿಂದ, ಶಿಷ್ಟತ್ವದಿಂದ ಚತುರ್ದಶಿಯದಿನ ತೈಲಾಭ್ಯಂಗನವನ್ನು ಮಾಡದಿದ್ದರೇ ರೌರವನರಕವನ್ನು ಹೊಂದುತ್ತಾನೆ. ನರಕಚತುರ್ದಶಿಯಂದು [ದೀಪಾವಲಿಯಂದು] ತೈಲದಲ್ಲಿಲಕ್ಷ್ಮಿಯೂ,ಜಲದಲ್ಲಿ ಗಂಗೆಯೂ ನೆಲೆಸಿರುವುದರಿಂದ ಅಂದು ಪ್ರಾತಃ ಸ್ನಾನ[ಅಭ್ಯಂಗ]ಮಾಡಿದವನು ನರಕವನ್ನು ಹೊಂದುವುದಿಲ್ಲ.ಅಪಾಮಾರ್ಗ [ಉತ್ತರಣೆ], ತುಂಬೀ [ಉದ್ದನೆಸೋರೆ], ಪ್ರಪುನ್ನಾಡ [ಚಕ್ರಮರ್ದವೃಕ್ಷ, ತಗಚೀ ಗಿಡ] ವನ್ನು ನರಕ ನಾಶಕ್ಕಾಗಿ ಜಲದಲ್ಲಿ ತಿರುಗಿಸಬೇಕು. ಸೀತಾಲೋಕಸಮಾಯುಕ್ತ ಎಂಬ ಮಂತ್ರದಿಂದ ಈ ಮೂರುಗಿಡವನ್ನು ರಕ್ಷೆಗಾಗಿ ತಲೆಯಮೇಲೆ ಮೂರುಬಾರಿ ನಿವಾಳಿಸಬೇಕು. ಸ್ನಾನಾನಂತರ ಒದ್ದೆಬಟ್ಟೆಯಲ್ಲಿಯೇ ಮೃತ್ಯುಪುತ್ರರಾದ ಅಣ್ಣ ತಮ್ಮಂದಿರಾದ, ಯಮ ಸೇವಕರಾದ ಶ್ಯಾಮ, ಶಬಲವೆಂಬ ನಾಯಿಗಳೆರಡೂ

ಈ ಚತುರ್ದಶಿಯಂದು ತೃಪ್ತರಾಗಲೀ ಎಂದು ದೀಪದಾನವನ್ನು ನೀಡಬೇಕು. ಇಷ್ಟರೂ ಬಂಧುಗಳೊಡನೆ ಅಭ್ಯಂಗ[ಎಣ್ಣೆಸ್ನಾನ]ವನ್ನು ಆಚರಿಸಬೇಕು. ಸ್ನಾನಾಂಗತರ್ಪಣವನ್ನು ನೀಡಿ, ನಂತರ ಯಮತರ್ಪಣವನ್ನು ನೀಡಬೇಕು. ೧.ಯಮನಿಗೆ, ೨.ಧರ್ಮರಾಜನಿಗೆ, ೩.ಮೃತ್ಯುವಿಗೆ, ೪.ಅಂತಕನಿಗೆ, ೫.ವೈವಸ್ವತನಿಗೆ, ೬.ಕಾಲನಿಗೆ, ೭.ಸರ್ವಭೂತಕ್ಷಯನಿಗೆ, ೮.ಔದುಂಬರನಿಗೆ, ೯.ದಧ್ನನಿಗೆ, ೧೦.ನೀಲನಿಗೆ, ೧೧.ಪರಮೇಷ್ಠಿಗೆ, ೧೨.ವೃಕೋದರನಿಗೆ, ೧೩.ಚಿತ್ರನಿಗೆ, ೧೪.ಚಿತ್ರಗುಪ್ತನಿಗೆ ನಮಸ್ಕಾರವು ಎಂದು,ಪ್ರತ್ಯೇಕವಾಗಿ ನಮಸ್ಕಾರದಿಂದ ಎಳ್ಳುಮಿಶ್ರಿತಜಲದಿಂದ ಮೂರುಮೂರು ತರ್ಪಣ ನೀಡಬೇಕು. ಯಮನಿಗೆ ದೇವತ್ವ ಹಾಗೂ ಪಿತೃತ್ವವೆಂಬ ಎರಡು ರೂಪವಿರು ವುದರಿಂದ ಸವ್ಯ ಅಥವಾ ಅಪಸವ್ಯದಿಂದ ತರ್ಪಣ ನೀಡಬಹುದು. ತಂದೆ ಬದುಕಿರುವವನೂ ಕೂಡ ಯಮ ಹಾಗೂ ಭೀಷ್ಮತರ್ಪಣ ನೀಡಬೇಕು. ತಿಲ ತರ್ಪಣ ಜೀವತ್ಪಿತೃಕನಿಗೆ ನಿಷಿದ್ಧವಾದ್ದರಿಂದ ಜಲಾಂಜಲಿಯನ್ನೇ ಮೂರು ಬಾರಿ ನೀಡಬೇಕು. ಇದನ್ನು ನಿತ್ಯದಲ್ಲೂ ನೀಡುವ ಸಂಪ್ರದಾಯವೂ ಇದೆ.

ಆಚಮ್ಯ, ಪ್ರಾಣಾನಾಮ್ಯ, ಪ್ರಾಚೀನಾವೀತಿಃ, ದಕ್ಷಿಣಾಭಿಮುಖೇನ, ಪಿತೃ ತೀರ್ಥೇನ, ತ್ರೀನ್ ತ್ರೀನ್ ತಿಲಾಂಜಲಿಂ ದದ್ಯಾತ್. [ಜೀವತ್‌ಪಿತೃಕಃ ಉಪವೀತಿಃ, ಪ್ರಾಙ್ಮುಖೋ, ದೇವತೀರ್ಥೇನ, ಏಕೈಕವಾರಂ ಜಲಾಂಜಲಿಂ ದದ್ಯಾತ್,] . ಶ್ರೀವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಆದ್ಯಬ್ರಹ್ಮಣಃ ದ್ವಿತೀಯಪರಾರ್ಧೇ ಶ್ವೇತವರಾಹಕಲ್ಪೇ ವೈವಸ್ವತಮನ್ವಂತರೇ ಕಲಿಯುಗೇ ಪ್ರಥಮಪಾದೇ ಜಂಬೂದ್ವೀಪೇ ಭರತವರ್ಷೇ ಭರತಖಂಡೇ ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣೇತೀರೇ ಶಾಲಿವಾಹನಶಕೇ ಬೌದ್ಧಾವತಾರೇ ರಾಮಕ್ಷೇತ್ರೇ ಅಸ್ಮಿನ್ ವರ್ತಮಾನೇ ಚಾಂದ್ರಮಾನೇನ ............................ ಸಂವತ್ಸರೇ, ದಕ್ಷಿಣಾಯನೇ, ಶರದೃತೌ, ಆಶ್ವಯುಜಮಾಸೇ, ಕೃಷ್ಣಪಕ್ಷೇ , ಚತುರ್ದಶ್ಯಾಂ ಚ ತಿಥೌ, .......... ವಾಸರಯುಕ್ತಾಯಾಂ ಶುಭನಕ್ಷತ್ರ, ಶುಭಯೋಗ, ಶುಭಕರಣ ಏವಂಗುಣ ವಿಶೇಷಣ ವಿಶಿಷ್ಟಾಯಾಂ ಶುಭಪುಣ್ಯತಿಥೌ ಯಮಭಯನರಕಾದಿ ದುಃಖನಿವೃತ್ತಿದ್ವಾರಾ ಮನುನಾಮಕಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀವಿಷ್ಣುಪ್ರೇರಣಯಾ,ಶ್ರೀವಿಷ್ಣುಪ್ರೀತ್ಯರ್ಥಂ ಯಮತರ್ಪಣಾಂ ಕರಿಷ್ಯೇ [ಎಂದು ಸಂಕಲ್ಪಿಸಿ ಈ ಮುಂದಿನ ೧೪ ಮಂತ್ರಗಳಿಂದ ಅಧಿಕಾರಕ್ಕೆ ತಕ್ಕಂತೆ ತರ್ಪಣ ನೀಡುವುದು.] ೧. ಯಮಂ ತರ್ಪಯಾಮಿ, ೨. ಧರ್ಮರಾಜಂ ತರ್ಪಯಾಮಿ,

೩. ಮೃತ್ಯುಂ ತರ್ಪಯಾಮಿ, ೪. ಅಂತಕಂ ತರ್ಪಯಾಮಿ, ೫. ವೈವಸ್ವತಂ ತರ್ಪಯಾಮಿ, ೬. ಕಾಲಂ ತರ್ಪಯಾಮಿ, ೭. ಸರ್ವಭೂತಕ್ಷಯಂ ತರ್ಪಯಾಮಿ, ೮. ಔದುಂಬರಂ ತರ್ಪಯಾಮಿ, ೯. ದಧ್ನಂ ತರ್ಪಯಾಮಿ, ೧೦. ನೀಲಂ ತರ್ಪಯಾಮಿ, ೧೧. ಪರಮೇಷ್ಠಿನಂ ತರ್ಪಯಾಮಿ, ೧೨. ವೃಕೋದರಂ ತರ್ಪಯಾಮಿ, ೧೩. ಚಿತ್ರಂ ತರ್ಪಯಾಮಿ, ೧೪. ಚಿತ್ರಗುಪ್ತಂ ತರ್ಪಯಾಮಿ. ಯಮೋ ನಿಹಂತಾ ಪಿತೃಧರ್ಮರಾಜೋ ವೈವಸ್ವತೋ ದಂಡಧರಶ್ಚ ಕಾಲಃ। ಭೂತಾಧಿಪೋ ದತ್ತಕೃತಾನುಸಾರೀ ಕೃತಾಂತಕಶ್ಚೇತಿ ಸಕೃಜ್ಜಪಂತಿ ॥ ಎಂಬ ಶ್ಲೋಕವನ್ನು ಹೇಳಬೇಕು. [ ನಂತರ ಆಚಮನಮಾಡಿ, ಯಸ್ಯ ಸ್ಮೃತ್ಯಾ..] ಯಮಾಂತರ್ಗತ ಮನುನಾಮಕಭಾರತೀರಮಣ ಮುಖ್ಯಪ್ರಾಣಾಂತರ್ಗತಶ್ರೀವಿಷ್ಣು ಪ್ರಿಯತಾಂ ಪ್ರೀತೋವರದೋಭವತು ಶ್ರೀಕೃಷ್ಣಾರ್ಪಣಮಸ್ತು. ಎಂದು ಸಮರ್ಪಣೆ ಮಾಡಬೇಕು.

## ೧೩. ಭೀಷ್ಮತರ್ಪಣಂ

ಮಾಘಶುದ್ಧ ಅಷ್ಟಮೀ ಭೀಷ್ಮಾಷ್ಟಮೀ. ಅಂದು ಸವ್ಯದಿಂದ ತಂದೆ ಬದುಕಿರುವವನು ಅಪಸವ್ಯದಿಂದ ತಂದೆಯಿಲ್ಲದವರೂ ತರ್ಪಣ ನೀಡಬೇಕು. ಆಚಮ್ಯ, ಪ್ರಾಣಾನಾಯಮ್ಯ, ಜೀವತ್‌ಪಿತೃಕಃ ಉಪವೀತಿಃ ಪ್ರಾಙ್ಮುಖೋ, ದೇವತೀರ್ಥೇನ, ಏಕೈಕವಾರಂ ಜಲಾಂಜಲಿಂ ದದ್ಯಾತ್, ಪ್ರಾಚೀನಾವೀತಿಃ, ದಕ್ಷಿಣಾಭಿಮುಖೇನ, ಪಿತೃತೀರ್ಥೇನ, ತ್ರೀನ್ ತ್ರೀನ್ ತಿಲಾಂಜಲಿಂ ದದ್ಯಾತ್. ಶ್ರೀವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಆದ್ಯಬ್ರಹ್ಮಣಃ ದ್ವಿತೀಯಪರಾರ್ಧೇ ಶ್ವೇತವರಾಹಕಲ್ಪೇ ವೈವಸ್ವತಮನ್ವಂತರೇ ಕಲಿಯುಗೇ ಪ್ರಥಮಪಾದೇ ಜಂಬೂದ್ವೀಪೇ ಭರತವರ್ಷೇ ಭರತಖಂಡೇ ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣೇತೀರೇ ಶಾಲಿವಾಹನಶಕೇ ಬೌದ್ಧಾವತಾರೇ ರಾಮಕ್ಷೇತ್ರೇ ಅಸ್ಮಿನ್ ವರ್ತಮಾನೇ ಚಾಂದ್ರಮಾನೇನ ............................ ಸಂವತ್ಸರೇ, ಉತ್ತರಾಯಣೇ, ಶಿಶಿರ ಋತೌ ಮಾಘಮಾಸೇ, ಶುಕ್ಲಪಕ್ಷೇ , ಅಷ್ಟಮ್ಯಾಂ ಚ ತಿಥೌ, .......... ವಾಸರ ಯುಕ್ತಾಯಾಂ ಶುಭನಕ್ಷತ್ರ, ಶುಭಯೋಗ, ಶುಭಕರಣ ಏವಂಗುಣ ವಿಶೇಷಣ ವಿಶಿಷ್ಟಾಯಾಂ ಶುಭಪುಣ್ಯತಿಥೌ ಸಂವತ್ಸರಕೃತ ಪಾಪನಾಶನಾರ್ಥಂ ಮನುನಾಮಕಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀವಿಷ್ಣುಪ್ರೇರಣಯಾ, ಶ್ರೀವಿಷ್ಣುಪ್ರೀತ್ಯರ್ಥಂ ಭೀಷ್ಮತರ್ಪಣಂ ಕರಿಷ್ಯೇ.

ತಂದೆ ಬದುಕಿರುವವರು ಜಲದಿಂದ ಈ ಮಂತ್ರದಿಂದ ದೇವತೀರ್ಥ, ಉಪವೀತಿಯಾಗಿ, ಪೂರ್ವಾಭಿಮುಖವಾಗಿ–ಭೀಷ್ಮ ಶಾಂತನವೋಧೀರಃ ಸತ್ಯವಾದೀ ಜಿತೇಂದ್ರಿಯಃ । ಆಭಿರದ್ಭಿರವಾಪ್ನೋತು ಪುತ್ರಪೌತ್ರೋಚಿತಂ ಕ್ರಿಯಾಂ ॥ ಭೀಷ್ಮಾಯನಮಃ ಇದಮರ್ಘ್ಯಂ, ಇದಮರ್ಘ್ಯಂ ॥೧॥ ವೈಯಾಘ್ರಪದ ಗೋತ್ರಾಯ ಸಾಂಕೃತ್ಯಪ್ರವರಾಯ ಚ । ಅಪುತ್ರಾಯ ದದಾಮ್ಯೇತಜ್ಜಲಂ ಭೀಷ್ಮಾಯ ವರ್ಮಣೇ॥ ಭೀಷ್ಮಾಯನಮಃ ಇದಮರ್ಘ್ಯಂ, ಇದಮರ್ಘ್ಯಂ ॥೨॥ ವಸೂನಾಮವತಾರಾಯ ಶಾಂತನೋರಾತ್ಮಜಾಯ ಚ । ಅರ್ಘ್ಯಂ ದದಾಮಿ ಭೀಷ್ಮಾಯ ಆಬಾಲಬ್ರಹ್ಮಚಾರಿಣೇ ॥ ಭೀಷ್ಮಾಯನಮಃ ಇದಮರ್ಘ್ಯಂ, ಇದಮರ್ಘ್ಯಂ ॥೩॥ ತಂದೆಯಿಲ್ಲದವರು, ತಿಲೋದಕದಿಂದ. ವೈಯಾಘ್ರಪಾದ ಗೋತ್ರಾಯ ಸಾಂಕೃತಿಪ್ರವರಾಯ ಚ । ಗಂಗಾಪುತ್ರಾಯ ಭೀಷ್ಮಾಯ ಪ್ರದಾಸ್ಯೇಽಹಂ ತಿಲೋದಕಂ ॥ ಪಿತೃತೀರ್ಥದಿಂದ ನೀಡಬೇಕು. [ ನಂತರ ಆಚಮನಮಾಡಿ, ಯಸ್ಯಸ್ಮೃತ್ಯಾ............] ಭೀಷ್ಮಾಂತರ್ಗತ ಮುಸುನಾಮಕ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀವಿಷ್ಣುಪ್ರಿಯತಾಂ ಪ್ರೀತೋ ವರದೋ ಭವತು ಶ್ರೀಕೃಷ್ಣಾರ್ಪಣಮಸ್ತು. ಎಂದು ಸಮರ್ಪಣೆ ಮಾಡಬೇಕು.

## ೧೪. ಗ್ರಹಣ ನಿಮಿತ್ತ ತರ್ಪಣ

ಗ್ರಹಣವಿಷಯವಾಗಿ ವೃದ್ಧಗಾರ್ಗ್ಯರು – ಚಂದ್ರನನ್ನು ಹುಣ್ಣಿಮೆ ಮತ್ತು ಪಾಡ್ಯಗಳ ಸಂಧಿಕಾಲದಲ್ಲಿ, ಸೂರ್ಯನನ್ನು ಅಮಾವಾಸ್ಯೆ ಮತ್ತು ಪಾಡ್ಯಗಳ ಸಂಧಿಕಾಲದಲ್ಲಿ ರಾಹುವು ಸಂಪೂರ್ಣ ಮಂಡಲನಾಗಿ ಹಿಡಿಯುವುದೇ ಕ್ರಮವಾಗಿ ಚಂದ್ರ ಹಾಗೂ ಸೂರ್ಯ ಗ್ರಹಣವು. [ ವೃದ್ಧಗಾರ್ಗ್ಯಃ – ಪೂರ್ಣಿಮಾ ಪ್ರತಿಪತ್‌ಸಂಧೌ ರಾಹುಃ ಸಂಪೂರ್ಣ ಮಂಡಲಃ। ಗ್ರಸತೇ ಚಂದ್ರಮರ್ಕಂ ಚ ದರ್ಶಪ್ರತಿಪದಂತರಾ॥ ] ಎಂದಿದ್ದಾರೆ. ವ್ಯಾಸರು – ಸರ್ವಪ್ರಯತ್ನದಿಂದ ರಾಹುವಿನದರ್ಶನವಾದಾಗ ಅಂದರೆ ಗ್ರಹಣವುಂಟಾದಾಗ ಶ್ರಾದ್ಧವನ್ನು ಮಾಡಬೇಕು. ಈ ಸಮಯದಲ್ಲಿ ಶ್ರಾದ್ಧವನ್ನು ಮಾಡದಿದ್ದರೆ ಹಸುಕೆಸರಲ್ಲಿ ಸಿಕ್ಕಿಕೊಂಡ ಹಾಗೆ ಶ್ರಾದ್ಧಮಾಡದವನ ಪರಿಸ್ಥಿತಿಯಾಗುತ್ತದೆಯೆಂದಿದ್ದಾರೆ. [ವ್ಯಾಸಃ–ಸರ್ವಸ್ವೇನಾಽಪಿ ಕರ್ತವ್ಯಂ ಶ್ರಾದ್ಧಂ ವೈ ರಾಹುದರ್ಶನೇ। ಅಕುರ್ವಾಣಸ್ತು ತಚ್ಛ್ರಾದ್ಧಂ ಪಙ್ಕೇ ಗೌರಿವ ಸೀದತಿ॥] ಎಂದು ಶ್ರಾದ್ಧತ್ಯಾಗದಿಂದ

ಆಗುವ ಅನರ್ಥವನ್ನು ತಿಳಿಸಿದ್ದಾರೆ. ಶಾತಾತಪರು – ಸೂರ್ಯಚಂದ್ರಗ್ರಹಣದಲ್ಲಿ ಶ್ರಾದ್ಧವನ್ನು ಆಮ [ ಅಕ್ಕಿ, ಬೇಳೆ, ತರಕಾರಿ ಇತ್ಯಾದಿ ಬೇಯಿಸದ ಹಸೀ ಪದಾರ್ಥ], ಅಥವಾ ಹಿರಣ್ಯಶ್ರಾದ್ಧ [ ಹಣದಿಂದ ] ಮಾಡಬೇಕೆಂದಿದ್ದಾರೆ. ಹವಿಸ್ಸಾನ್ನವನ್ನು ಗ್ರಹಣದಲ್ಲಿ ಬಿಡಬೇಕೆಂದಿದ್ದಾರೆ. [ ಗ್ರಹಣದ ಪೂರ್ವದಲ್ಲಿಯೇ ಎಲ್ಲರಿಗೂ ಭೋಜನ ನಿಷೇಧಿಸಿರುವುದರಿಂದಲೂ ಶಾತಾತಪರ ಮಾತು ಸಮರ್ಥ ನೀಯವಾಗಿದೆ. ಶಾತಾತಪಃ –ಆಮಶ್ರಾದ್ಧಂ ತು ಕರ್ತವ್ಯಂ ಸೂರ್ಯೇಂದು ಗ್ರಹಣೇ ನರೈಃ। ಹೇಮ್ನಾ ವಾ ಕಾರಯೇತ್‌ಶ್ರಾದ್ಧಂ ಶ್ರುತಾನ್ನಂ ಪರಿವರ್ಜಯೇತ್॥ ]

ಇದರಿಂದ ಗ್ರಹಣ ಕಾಲದಲ್ಲಿ ಶ್ರಾದ್ಧಪ್ರತಿನಿಧಿಯಾಗಿ ತರ್ಪಣ ನೀಡುವುದ ರಿಂದಲೂ ಶ್ರಾದ್ಧದ ಫಲಪ್ರಾಪ್ತಿಯಾಗುತ್ತದೆಂಬುದು ತಿಳಿದು ಬರುತ್ತದೆ.

ಗ್ರಹಣನಿಮಿತ್ತ ತರ್ಪಣ ಸರ್ವಪಿತೃ ತರ್ಪಣ. ಚಂದ್ರಗ್ರಹಣದಲ್ಲಿ ಮಧ್ಯಕಾಲದ ನಂತರ ತರ್ಪಣ ನೀಡಬೇಕು. ಸೂರ್ಯಗ್ರಹಣದಲ್ಲಿ ಮಧ್ಯಕಾಲದ ಒಳಗೆ ತರ್ಪಣ ನೀಡಬೇಕು. ಕ್ರಮವನ್ನು ಷಣ್ಣವತೀ ತರ್ಪಣದಲ್ಲಿ ನೀಡಲಾಗಿದೆ.

## ೧೫. ಉಪಾಕರ್ಮಾಂಗ ತರ್ಪಣ

ಕೆಲವು ಸಂದರ್ಭಗಳಲ್ಲಿ ಉಪಾಕರ್ಮ ನಡೆಯುವಲ್ಲಿ ಹೋಗಲು ಆಗದಿದ್ದರೆ ಮಾತ್ರ ಇಲ್ಲಿನ ಕ್ರಮದಂತೆ ನೂತನ ಯಜ್ಞೋಪವೀತವನ್ನು ಧರಿಸಿ, ಮನೆಯ ಲ್ಲಿಯೇ ಉಪಾಕರ್ಮಾಂಗ ತರ್ಪಣ ನೀಡಬಹುದು. ಬ್ರಹ್ಮಚಾರಿ ಒಂದನ್ನೂ, ಸ್ನಾತಕ ಎರಡು, [ಗುರುಕುಲದಲ್ಲಿ ಸಾಂಗ ಅಧ್ಯಯನ ಮುಗಿಸಿದವ ಸ್ನಾತಕ ಸಾಮಾನ್ಯವಾಗಿ ಗೃಹಸ್ಥ ], ಅಥವಾ ಹೆಚ್ಚು ಧರಿಸಬಹುದು. ಶ್ರೌತಸ್ಮಾರ್ತ ಕರ್ಮಗಳಲ್ಲಿ ಗೃಹಸ್ಥನು ಎರಡು ಉಪವೀತಗಳನ್ನು ಧರಿಸಬೇಕು. ಬ್ರಹ್ಮಚಾರಿಣ ಏಕಂ ಸ್ಯಾತ್ ಸ್ನಾತಸ್ಯ ದ್ವೇ ಬಹೂನಿ ವಾ । ಗೃಹಸ್ಥೇನ ತು ದ್ವೇ ಧಾರ್ಯೇ ಶ್ರೌತೇ ಸ್ಮಾರ್ತೇ ಚ ಕರ್ಮಣಿ ॥ ದ್ವಿರಾಚಮನ, ಪ್ರಾಣಾಯಾಮ, ಸಂಕಲ್ಪ, ಪ್ರೋಕ್ಷಣ, ಪ್ರಾಣಪ್ರತಿಷ್ಠೆ, ಹತ್ತು ಗಾಯತ್ರಿಯಿಂದ ಅಭಿಮಂತ್ರಣ, ನವ [ಒಂಭತ್ತು] ತಂತು ದೇವತಾಹ್ವಾನ [ ಪ್ರಾಣಪ್ರತಿಷ್ಠಾಂ ಯೋಽಕೃತ್ವಾ ಉಪವೀತಂ ವಹೇದ್ಯದಿ । ವ್ಯರ್ಥಂ ಭವತಿ ತತ್ಸರ್ವಂ ಪಶುವದ್ವಹತಿ ಸ ಧ್ರುವಮ್ ॥ ಎಂಬ ವಚನಾನುಸಾರ ಪ್ರಾಣಪ್ರತಿಷ್ಠೆಯಿಲ್ಲದ ಯಜ್ಞೋಪವೀತವನ್ನು ಧರಿಸ ಬಾರದು. ಹಾಗೆಯೇ ಯಜ್ಞೋಪವೀತಕಂ ಕುರ್ಯಾತ್ ಸೂತ್ರಾಣಿ ನವತಂತುಭಿಃ

ಎಂಬ ದೇವಲರ ವಚನದಂತೆ ಒಂಭತ್ತು ಎಳೆ ಅಂದರೆ ಜನಿವಾರದ ಮೂರು ಎಳೆಯಲ್ಲಿ ಪ್ರತಿಯೊಂದು ಎಳೆಯೂ ಮೂರು ದಾರದಿಂದ ಹೊಸೆದಿದ್ದಾಗಿರಬೇಕು. ಆಗ ಜನಿವಾರ ಮೂರು ಎಳೆಯದ್ದಾದರೂ ಒಂಭತ್ತು ತಂತು [ ದಾರ ] ದಿಂದ ಕೂಡಿದ್ದಾಗುತ್ತದೆ. ಈ ಒಂಭತ್ತು ಎಳೆಯಲ್ಲಿ ಒಂಭತ್ತು ದೇವತೆಗಳನ್ನು ಆಹ್ವಾನಿಸಬೇಕು. ದೇವರಿಗೆ ಸಮರ್ಪಿಸುವುದು ನಂತರ ಯಜ್ಞೋಪವೀತ ಧಾರಣೆ. ಬ್ರಹ್ಮಚಾರಿಗೆ ಒಂದು, ಗೃಹಸ್ಥನಿಗೆ ಎರಡು, ತಂದೆಯಿಲ್ಲದಿದ್ದರೂ ಜ್ಯೇಷ್ಠಭ್ರಾತೃ ಹಿರಿಯ ಅಣ್ಣನಿದ್ದರೆ ಉಪವೀತಾರ್ಥವಾಗಿ ಮೂರನೇ ಯಜ್ಞೋಪ ವೀತ ಧರಿಸಬಾರದು. ಆವೇಷ್ಟ್ಯ ಷಣ್ಣವತ್ಯಾ ಚ ತ್ರಿಗುಣೀಕೃತ್ಯ ಯತ್ನತಃ ॥ ಅಬ್ಲಿಂಗಕೈಸ್ತ್ರಿಭಿಃ ಸಮ್ಯಕ್‌ಪ್ರಕ್ಷಾಲ್ಯೋರ್ಧ್ವಂ ವೃತಂ ತು ಯತ್ । ಅಪ್ರದಕ್ಷಿಣ ಮಾವೃತ್ತಂ ಸಾವಿತ್ರ್ಯಾ ತ್ರಿಗುಣೀಕೃತಂ ॥ ಅಧಃ ಪ್ರದಕ್ಷಿಣಾವೃತ್ತಂ ಸಮಂ ಸ್ಯಾನ್ನವಸೂತ್ರಕಮ್ । ತ್ರಿರಾವೇಷ್ಟ್ಯ ದೃಢಂ ಬದ್ಧ್ವಾ ಹರಿಬ್ರಹ್ಮೇಶ್ವರಾ ನ್ನ್ಯಸೇತ್ ॥ ಸೂತ್ರಂ ಸಲೋಮಕಂ ಯಚ್ಚ ತತಃ ಕೃತ್ವಾ ವಿಲೋಮಕಂ । ಸಾವಿತ್ರ್ಯಾ ದಶಕೃತ್ವೋಽದ್ಭಿರ್ಮಂತ್ರಿತಾಭಿಸ್ತದುಕ್ಷಯೆ ] ಉಪಾಕರ್ಮದಲ್ಲಿ, ಸೂತಕ ಜಾತಾಶೌಚ, ಮೃತಾಶೌಚದ ನಂತರ, ಒಮ್ಮೆ ಧರಿಸಿದ ಮೇಲೆ ನಾಲ್ಕು ತಿಂಗಳ ಕಾಲಾನಂತರ , ಅನ್ಯ ರೀತಿಯ ಮೈಲಿಗೆಯಾದಾಗಲೂ ನೂತನ ಯಜ್ಞೋಪವೀತ ವನ್ನು ಧರಿಸಬೇಕು. [ ಉಪಾಕೃತೇ ಸೂತಕೇ ಚ ಧೃತೇ ಮಾಸಚತುಷ್ಟಯೇ । ಧೃತ್ವಾ ನವೋಪವೀತಂ ಚ ವಿಸೃಜೇಜ್ಜೀರ್ಣಕಂ ತಥಾ ॥ ] .

### ೧೬. ಸಂಕ್ಷಿಪ್ತ ಯಜ್ಞೋಪವೀತ ಪ್ರತಿಷ್ಠೆ ಹಾಗೂ ಧಾರಣಾ ವಿಧಿ

ದ್ವಿರಾಚಮ್ಯ , ಪ್ರಾನಾನಾಯಾಮ್ಯ, ಸಂಕಲ್ಪ್ಯ, – ಶ್ರೀವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಆದ್ಯಬ್ರಹ್ಮಣಃ ದ್ವಿತೀಯ ಪರಾರ್ಧೇ ಶ್ವೇತವರಾಹ ಕಲ್ಪೇ ವೈವಸ್ವತ ಮನ್ವಂತರೇ ಕಲಿಯುಗೇ ಪ್ರಥಮಪಾದೇ ಭರತವರ್ಷೇ ಭರತಖಂಡೇ ಜಂಬೂದ್ವೀಪೇ ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣೇತೀರೇ ಶಾಲಿವಾಹನ ಶಕೇ ಬೌದ್ಧಾವತಾರೇ ರಾಮಕ್ಷೇತ್ರೇ ಅಸ್ಮಿನ್ ವರ್ತಮಾನೇ ಚಾಂದ್ರಮಾನೇನ ......................ಸಂವತ್ಸರೇ, ದಕ್ಷಿಣಾಯನೇ........... ಋತೌ, .........ಮಾಸೇ, ಶುಕ್ಲಪಕ್ಷೇ............ತಿಥೌ, ........... ವಾಸರಯುಕ್ತಾಯಾಂ ಶುಭನಕ್ಷತ್ರ, ಶುಭ ಯೋಗ, ಶುಭಕರಣ ಏವಂಗುಣ ವಿಶೇಷಣ ವಿಶಿಷ್ಟಾಯಾಂ ಶುಭ ಪುಣ್ಯತಿಥೌ ಉಪಾಕರ್ಮಾಂಗತಯಾ ಶ್ರೀವೇದವ್ಯಾಸ ಪ್ರೇರಣಯಾ, ಶ್ರೀವೇದವ್ಯಾಸ ಪ್ರೀತ್ಯರ್ಥಂ ನೂತನ ಯಜ್ಞೋಪವೀತ ಪ್ರತಿಷ್ಠಾಂ ಧಾರಣಂ ಚ ಕರಿಷ್ಯೇ ॥

[ಯಜ್ಞೋಪವೀತವನ್ನು ಪಲಾಶ [ಮುತ್ತುಗದ] ಎಲೆ, ತಾಮ್ರ ಅಥವಾ ಬೆಳ್ಳಿಯ ಪಾತ್ರೆಯಲ್ಲಿಟ್ಟು] ಓಂ ಆಪೋಹಿಷ್ಠೇತಿ ತೃಚಸ್ಯಸೂಕ್ತಸ್ಯ ಅಂಬರೀಷಃ ಸಿಂಧುದ್ವೀಪ ಋಷಿಃ ಆಪೋದೇವತಾ ಗಾಯತ್ರೀಛಂದಃ ಮಾರ್ಜನೇ ವಿನಿಯೋಗಃ ।। ಓಂ ಆಪೋಹಿಷ್ಠಾ ಮಯೋಭುವಃ । ಓಂ ತಾನಊರ್ಜೇ ದಧಾತನ । ಓಂ ಮಹೇರಣಾಯ ಚಕ್ಷಸೇ । ಓಂ ಯೋವಶ್ಶಿವತಮೋರಸಃ । ಓಂ ತಸ್ಯ ಭಾಜ ಯತೇಹನಃ । ಓಂ ಉಶತೀರಿವಮಾತರಃ । ಓಂ ತಸ್ಮಾಅರಂಗ ಮಾಮವಃ । ಓಂ ಯಸ್ಯಕ್ಷಯಾಯ ಜಿನ್ವಥ । ಓಂ ಆಪೋಜನಯಥಾಚನಃ [ ಎಂದು ಮಾರ್ಜನ ಮಾಡಿ ಮುಂದಿನ ಮಂತ್ರದಿಂದ ಪ್ರಾಣಪ್ರತಿಷ್ಠೆ ಮಾಡಬೇಕು, ] ಅಸುನೀತೇ ಇತಿ ಮಂತ್ರಸ್ಯ ಬಂಧ್ವಾದಯ ಋಷಯಃ ಅಸುನೀತೀ ದೇವತಾ ತ್ರಿಷ್ಟುಪ್ ಛಂದಃ ಪ್ರಾಣಪ್ರತಿಷ್ಠಾಪನೇ ವಿನಿಯೋಗಃ – ಓಂ ಅಸುನೀತೇ ಪುನರಸ್ಮಾಸು ಚಕ್ಷುಃ ಪುನಃ ಪ್ರಾಣಮಿಹ ನೋ ಧೇಹಿ ಭೋಗಮ್ । ಜ್ಯೋಕ್ ಪಶ್ಯೇಮ ಸೂರ್ಯಮುಚ್ಚ ರಂತ ಮನುಮತೇ ಮೃಳಯಾನಃ ಸ್ವಸ್ತಿ ।। ಪುನರ್ನೋ ಅಸುಂ ಪೃಥಿವೀ ದದಾತು ಪುನರ್ದ್ಯೌರ್ದೇವೀ ಪುನರಂತರಿಕ್ಷಮ್ । ಪುನರ್ನಸ್ಸೋಮಸ್ತನ್ವಂ ದದಾತು ಪುನಃ ಪೂಷಾ ಪಥ್ಯಾಂಽ ಯಾ ಸ್ವಸ್ತಿ ।। [ ನಂತರ ಹತ್ತು ಗಾಯತ್ರಿಯಿಂದ ಯಜ್ಞೋಪವೀತವನ್ನು ಅಭಿಮಂತ್ರಿಸಿ , ಈ ಮುಂದಿನಂತೆ ಒಂಭತ್ತು ಎಳೆಯಲ್ಲಿ ಒಂಭತ್ತು ದೇವತೆಗಳನ್ನು ಆಹ್ವಾನಿಸಬೇಕು. ] ಯಜ್ಞೋಪವೀತದೇವತಾರೂಪಾನ್ ಬ್ರಹ್ಮವಿಷ್ಣುರುದ್ರಾನ್ ನವತಂತುದೇವತಾ ಭೂತಾನ್ ಓಂಕಾರಾದೀನ್ ತದಂತ ರ್ನಿಯಾಮಕಾನ್ ಅನಿರುದ್ಧಾದೀನ್ ಗ್ರಂಥಿದೇವತಾಂ ಬ್ರಹ್ಮಾಣಂ ತದಂತರ್ಯಾ ಮಿಣಂ ವಿಷ್ಣುಂ ಚ ಧ್ಯಾತ್ವಾ, ಬ್ರಹ್ಮಣೇ ನಮಃ ಸೂತ್ರೋತ್ಪಾದಕಂ ಬ್ರಹ್ಮಾಣಂ ತದಂತರ್ಗತಂ ವಿಷ್ಣುಮಾವಾಹಯಾಮಿ , ವಿಷ್ಣವೇ ನಮಃ ತ್ರಿಗುಣೀಕರ್ತಾರಂ ವಿಷ್ಣುಮಾವಾಹಯಾಮಿ, ರುದ್ರಾಯ ನಮಃ ತದ್ಗ್ರಂಥಿದಾತಾರಂ ರುದ್ರಂ ತದಂತರ್ಗತಂಭಾರತೀರಮಣಮುಖ್ಯಪ್ರಾಣಾಂತರ್ಗತ ಸಂಕರ್ಷಣಮಾವಾಹ ಯಾಮಿ , ಓಂಕಾರಾಯ ನಮಃ ಓಂಕಾರವಾಚ್ಯಮನಿರುದ್ಧಂ ಪ್ರಥಮ ತಂತೌ ನ್ಯಸಾಮಿ, ಅಗ್ನಯೇ ನಮಃ ಅಗ್ನ್ಯಂತರ್ಗತ ಭಾರತೀರಮಣಮುಖ್ಯಪ್ರಾಣಾಂತ ರ್ಗತ ಪ್ರದ್ಯುಮ್ನಂ ದ್ವಿತೀಯ ತಂತೌ ನ್ಯಸಾಮಿ, ನಾಗಾಯ ನಮಃ ನಾಗಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಸಂಕರ್ಷಣಂ ತೃತೀಯ ತಂತೌ ನ್ಯಸಾಮಿ, ಸೋಮಾಯ ನಮಃ ಸೋಮಾಂತರ್ಗತ ಭಾರತೀರಮಣಮುಖ್ಯ ಪ್ರಾಣಾಂತರ್ಗತ ವಾಸುದೇವಂ ಚತುರ್ಥ ತಂತೌ ನ್ಯಸಾಮಿ , ಪಿತೃಭ್ಯೋ ನಮಃ ಪಿತ್ರಂತರ್ಗತ

ಭಾರತೀರಮಣ ಮುಖ್ಯಪ್ರಾಣಾಂತರ್ಗತ ನಾರಾಯಣಂ ಪಂಚಮ ತಂತೌ ನ್ಯಸಾಮಿ. ಪ್ರಜಾಪತಯೇ ನಮಃ ಪ್ರಜಾಪತ್ಯಂತರ್ಗತ ಭಾರತೀರಮಣಮುಖ್ಯ ಪ್ರಾಣಾಂತರ್ಗತ ವಾಸುದೇವಂ ಷಷ್ಠ ತಂತೌ ನ್ಯಸಾಮಿ, ವಾಯವೇ ನಮಃ ವಾಯ್ವಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತ ಸಂಕರ್ಷಣಂ ಸಪ್ತಮ ತಂತೌ ನ್ಯಸಾಮಿ , ಸೂರ್ಯಾಯ ನಮಃ ಸೂರ್ಯಾಂತರ್ಗತ ಭಾರತೀರಮಣಮುಖ್ಯ ಪ್ರಾಣಾಂತರ್ಗತ ಪ್ರದ್ಯುಮ್ನಂ ಅಷ್ಟಮ ತಂತೌ ನ್ಯಸಾಮಿ , ವಿಶ್ವೇಭ್ಯೋ ದೇವೇಭ್ಯೋ ನಮಃ ವಿಶ್ವೇದೇವಾಂತರ್ಗತ ಭಾರತೀರಮಣಮುಖ್ಯಪ್ರಾಣಾಂತ ರ್ಗತ ಅನಿರುದ್ಧಂ ನವಮ ತಂತೌ ನ್ಯಸಾಮಿ. ತ್ರಿಗುಣೀಕೃತ ಪ್ರಥಮ ತಂತೌ ಋಗ್ವೇದಂ ತತ್ಪ್ರತಿಪಾದ್ಯ ಭಾರತೀರಮಣಮುಖ್ಯಪ್ರಾಣಾಂತರ್ಗತ ಅನಿರುದ್ಧಮಾ ವಾಹಯಾಮಿ, ತ್ರಿಗುಣೀ ಕೃತ ದ್ವಿತೀಯ ತಂತೌ ಯಜುರ್ವೇದಂ ತತ್ಪ್ರತಿಪಾದ್ಯ ಭಾರತೀರಮಣಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಮಾವಾಹಯಾಮಿ, ತ್ರಿಗುಣೀ ಕೃತ ತೃತೀಯ ತಂತೌ ಸಾಮವೇದಂ ತತ್ಪ್ರತಿಪಾದ್ಯ ಭಾರತೀರಮಣಮುಖ್ಯ ಪ್ರಾಣಾಂತರ್ಗತ ಸಂಕರ್ಷಣಮಾವಾಹಯಾಮಿ, ಗ್ರಂಥೌ ಅಥರ್ವವೇದಂ ತತ್ಪ್ರತಿಪಾದ್ಯ ಭಾರತೀ ರಮಣಮುಖ್ಯಪ್ರಾಣಾಂತರ್ಗತ ವಾಸುದೇವ ಮಾವಾಹಯಾಮಿ, ಆವಾಹಿತ ದೇವತಾಭ್ಯೋ ನಮಃ ॥ [ ಯಜ್ಞೋಪವೀತವನ್ನು ಅರ್ಘ್ಯ ಪಾದ್ಯಾದಿ, ಗಂಧಪುಷ್ಪಾದಿ, ಧೂಪದೀಪಾದಿ ನೈವೇದ್ಯಗಳಿಂದ ಆವಾಹಿತ ದೇವತೆಗಳನ್ನು ಪೂಜಿಸಿ ] ಯಜ್ಞೋಪವೀತ ಸಹಜ ಬ್ರಹ್ಮಣಾಂ ವಿದುಷಾಂ ಪ್ರಿಯ । ಶ್ರೌತಸ್ಮಾರ್ತಾದಿಕಾನಾಂ ಚ ಕರ್ಮಣಾಮಧಿಕಾರದ ॥ ಮಮ ಬ್ರಾಹ್ಮಣ್ಯ ಸಿದ್ಧ್ಯರ್ಥಂ ವಹಾಮಿ ತ್ವಾಮತಂದ್ರಿತಃ । ಪಾವಿತ್ರ್ಯಂ ಬಲಮಾಯುಷ್ಯಂ ಶ್ರಿಯಂ ಕಾಂತಿಮರೋಗತಾಮ್ । ಹರಿತದ್ಭಕ್ತಸೇವಾಂ ಚ ಸದಾ ಕುರು ಜಗತ್ಪ್ರಿಯ ॥ ಎಂದು ಯಜ್ಞೋಪವೀತವನ್ನು ಪ್ರಾರ್ಥಿಸಿ ಸಾಲಿಗ್ರಾಮಾದಿ ಸಂಪುಟದ ಮೇಲಿಟ್ಟು ದೇವರಿಗೆ ಸಮರ್ಪಿಸಿದ ನಂತರ ಉದುತ್ಯಮಿತಿ ಮಂತ್ರಸ್ಯ ಪ್ರಸ್ಕಣ್ವಃ ಋಷಿಃ ಸೂರ್ಯೋ ದೇವತಾ, ಗಾಯತ್ರೀ ಛಂದಃ ಸೂರ್ಯಾಯ ಯಜ್ಞೋಪವೀತ ಪ್ರದರ್ಶನೇ ವಿನಿಯೋಗಃ – ಓಂ ಉದುತ್ಯಂ ಜಾತವೇದಸಂ ದೇವಂ ವಹಂತಿ ಕೇತವಃ । ದೃಶೇ ವಿಶ್ವಾಯ ಸೂರ್ಯಮ್ ॥ ಅಪತ್ಯೇತಾಯವೋ ಯಥಾ ನಕ್ಷತ್ರಾಯಂ ತ್ಯಕ್ತುಭಿಃ । ಸೂರಾಯ ವಿಶ್ವಚಕ್ಷಸೇ ॥ ಅದೃಶ್ರಮಸ್ಯ ಕೇತವೋ ವಿರಶ್ಮಯೋ ಜನಾಂ ಅನು । ಭ್ರಾಜಂತೋ ಅಗ್ನಯೋ ಯಥಾ [ ಎಂದು ಸೂರ್ಯನಿಗೆ ಯಜ್ಞೋಪವೀತವನ್ನು ತೋರಿಸಿ ಮುಂದಿನ ಕ್ರಮದಂತೆ ಧರಿಸಬೇಕು. ]

ಆಚಮ್ಯ, ಸಂಕಲ್ಪ್ಯ, ಮಮ ಶ್ರೌತಸ್ಮಾರ್ತ ನಿತ್ಯಕರ್ಮಾನುಷ್ಠಾನಯೋಗ್ಯತಾ ಸಿದ್ಧ್ಯರ್ಥಂ [ **ಉಪಾಕರ್ಮಾಂಗವಾಗಿ ಹಾಕಿಕೊಳ್ಳುವಾಗ ಋಗ್ವೇದಿಗಳಿಗೆ – ಅರುಂಧತೀಸಹಿತ ಕಶ್ಯಪಾದಿ ಸಪ್ತರ್ಷ್ಯಂತರ್ಗತ, ಯಜುರ್ವೇದಿಗಳಿಗೆ ಪ್ರಾಜಾಪತ್ಯಾದಿ ನವಕಾಂಡ್ಯರ್ಷ್ಯಂತರ್ಗತ ಎಂಬುದನ್ನು ಸಂಕಲ್ಪದಲ್ಲಿ ಸೇರಿಸಿಕೊಳ್ಳಬೇಕು ಅನ್ಯ ಸಂದರ್ಭಗಳಲ್ಲಿ ಇದನ್ನು ಬಿಟ್ಟು ಸಂಕಲ್ಪ ಹೇಳಿಕೊಳ್ಳಬೇಕು** ] ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀವೇದವ್ಯಾಸ ಪ್ರೇರಣಯಾ, ಶ್ರೀವೇದವ್ಯಾಸ ಪ್ರೀತ್ಯರ್ಥಂ ನೂತನ ಯಜ್ಞೋಪವೀತ ಧಾರಣಮಹಂ ಕರಿಷ್ಯೇ ॥ [ ಎಂದು ಸಂಕಲ್ಪ ಮಾಡಿ ] ಯಜ್ಞೋಪವೀತಮಿತಿ ಮಂತ್ರಸ್ಯ ಪರಬ್ರಹ್ಮ ಋಷಿಃ, ಪರಮಾತ್ಮಾ ದೇವತಾ, ತ್ರಿಷ್ಟುಪ್ ಛಂದಃ ಯಜ್ಞೋಪವೀತಧಾರಣೇ ವಿನಿಯೋಗಃ – "ಓಂ ಯಜ್ಞೋಪವೀತಂ ಪರಮಂ ಪವಿತ್ರಂ ಪ್ರಜಾಪತೇರ್ಯತ್ ಸಹಜಂ ಪುರಸ್ತಾತ್ । ಆಯುಷ್ಯಮಗ್ರ್ಯಂ ಪ್ರತಿಮುಂಚ ಶುಭ್ರಂ ಯಜ್ಞೋಪವೀತಮ್ ಬಲಮಸ್ತು ತೇಜಃ"॥ ಎಂಬ ಮಂತ್ರದಿಂದ ಬೆರಳತುದಿಯಿಂದ ಹಿಡಿದಿರುವ ಯಜ್ಞೋಪವೀತವನ್ನು ಬಲಗೈಯನ್ನು ಎತ್ತಿ ಕಂಠದಲ್ಲಿ ಧರಿಸಬೇಕು, ಪುನಃ ಆಚಮನಮಾಡಿ ಗೃಹಸ್ಥರು ಗೃಹಸ್ಥಾಶ್ರಮ ಸಿದ್ಧ್ಯರ್ಥಂ ದ್ವಿತೀಯ ಯಜ್ಞೋಪವೀತ ಧಾರಣಮಹಂ ಕರಿಷ್ಯೇ ಎಂದು ಸಂಕಲ್ಪ ಮಾಡಿ "ಓಂ ಯಜ್ಞೋಪವೀತಂ ಪರಮಂ ಪವಿತ್ರಂ" ಎಂಬ ಮಂತ್ರದಿಂದಲೇ ದ್ವಿತೀಯ ಯಜ್ಞೋಪವೀತವನ್ನು ಧರಿಸಬೇಕು , ಅಧಿಕಾರ ವಿದ್ದವರು ತೃತೀಯ ಯಜ್ಞೋಪವೀತವನ್ನುವನ್ನು ಪುನಃ ಆಚಮನಮಾಡಿ ಉತ್ತರೀಯಾರ್ಥವಾಗಿ ಓಂ ಯಜ್ಞೋಪವೀತಂ ಪರಮಂ ಪವಿತ್ರಂ ಎಂಬ ಮಂತ್ರದಿಂದ ಮೂರನೆಯುದನ್ನು ಧರಿಸಬೇಕು. ಪುನಃ ಆಚಮನ ಮಾಡಬೇಕು. ಗಾಯತ್ರೀವೇದಮಾತಾಸಿ ಸೂತ್ರರೂಪೇಣ ತಿಷ್ಠಸಿ । ಪೂರ್ವಸೂತ್ರಗತಂ ತೇಜೋ ನೂತನೇ ಸ್ಥಾಪಯಾಮ್ಯಹಮ್ ॥೧॥ ಉಪವೀತಂ ಭಿನ್ನತಂತುಂ ಜೀರ್ಣಂ ಕಶ್ಮಲದೂಷಿತಮ್ । ವಿಸೃಜಾಮಿ ಜಲೇ ಬ್ರಹ್ಮನ್ ವರ್ಚೋ ದೀರ್ಘಾ ಯುರಸ್ತು ಮೇ ॥೨॥ ಎಂಬ ಮಂತ್ರ ಹೇಳಿ ಹಳೆಯ ಜನಿವಾರವನ್ನು ಪಾದದ ಕಡೆಯಿಂದ ತೆಗೆದು "ಸಮುದ್ರಂ ಗಚ್ಛ ಸ್ವಾಹಾ" ಎಂದು ನೀರಿನಲ್ಲಿ ಹಾಕಬೇಕು. ನಂತರ ಉಪಾಕರ್ಮಾಂಗ ದೇವ, ಋಷಿ, ಪಿತೃ ತರ್ಪಣವನ್ನು ಮುಂದೆ ಕೊಟ್ಟಿರುವ ಕ್ರಮದಲ್ಲಿ ನೀಡಬೇಕು. ಕೊನೆಗೆ ಆಚಮನ ಮಾಡಿ ಯಸ್ಯಸ್ಮೃತ್ಯಾದಿ ಮಂತ್ರದಿಂದ ಕರ್ಮ ಸಮರ್ಪಣೆ ಮಾಡಬೇಕು.

[ದೇವತರ್ಪಣ – ಅಕ್ಷತೆ ನೀರಿನೊಂದಿಗೆ ಉಪವೀತಿಯಾಗಿ ದೇವತೀರ್ಥದಿಂದ]
**ಉಪಾಕರ್ಮಾಂಗತ್ವೇನ ದೇವತಾ ತರ್ಪಣಂ ಕರಿಷ್ಯೇ**–[ಒಮ್ಮೆ ಮಾತ್ರ]
೧. ಸಾವಿತ್ರೀಂ ತರ್ಪಯಾಮಿ, ೨. ಬ್ರಹ್ಮಾಣಂ ತರ್ಪಯಾಮಿ, ೩. ಶ್ರದ್ಧಾಂ ತರ್ಪಯಾಮಿ, ೪. ಮೇಧಾಂ ತರ್ಪಯಾಮಿ, ೫. ಪ್ರಜ್ಞಾಂ ತರ್ಪಯಾಮಿ, ೬. ಧಾರಣಾಂ ತರ್ಪಯಾಮಿ, ೭. ಸದಸಸ್ಪತಿಂ ತರ್ಪಯಾಮಿ, ೮. ಅನುಮತಿಂ ತರ್ಪಯಾಮಿ, ೯. ಛಂದಾಂಸಿ ತರ್ಪಯಾಮಿ, ೧೦. ಋಷೀನ್ ತರ್ಪಯಾಮಿ, ೧೧. ಅಗ್ನಿಂ ತರ್ಪಯಾಮಿ, ೧೨. ಆಪ್ತ್ಯಣ ಸೂರ್ಯಾನ್ ತರ್ಪಯಾಮಿ, ೧೩. ಅಗ್ನಿಂ ತರ್ಪಯಾಮಿ, ೧೪. ಶಕುಂತಂ ತರ್ಪಯಾಮಿ, ೧೫. ಅಗ್ನಿಂ ತರ್ಪಯಾಮಿ, ೧೬. ಮಿತ್ರಾವರುಣೌ ತರ್ಪಯಾಮಿ, ೧೭. ಅಗ್ನಿಂ ತರ್ಪಯಾಮಿ, ೧೮. ಅಪಃ ತರ್ಪಯಾಮಿ, ೧೯. ಅಗ್ನಿಂ ತರ್ಪಯಾಮಿ, ೨೦. ಮರುತಃ ತರ್ಪಯಾಮಿ, ೨೧. ಅಗ್ನಿಂ ತರ್ಪಯಾಮಿ, ೨೨. ವಿಶ್ವಾನ್ ದೇವಾನ್ ತರ್ಪಯಾಮಿ, ೨೩. ಅಗ್ನಿಂ ತರ್ಪಯಾಮಿ, ೨೪. ಇಂದ್ರಾಸೋಮೌ ತರ್ಪಯಾಮಿ, ೨೫. ಇಂದ್ರಂ ತರ್ಪಯಾಮಿ, ೨೬. ಅಗ್ನಾಮರುತಃ ತರ್ಪಯಾಮಿ, ೨೭. ಪವಮಾನಸೋಮಂ ತರ್ಪಯಾಮಿ, ೨೮. ಪವಮಾನಸೋಮಂ ತರ್ಪಯಾಮಿ, ೨೯. ಅಗ್ನಿಂ ತರ್ಪಯಾಮಿ, ೩೦. ಸಂಜ್ಞಾನಂ ತರ್ಪಯಾಮಿ, [ ಇಲ್ಲಿಯವರೆಗೆ ಉಪಾಕರ್ಮಾಂಗ ದೇವತರ್ಪಣ, ನಂತರ ಬ್ರಹ್ಮಯಜ್ಞಾಂಗ ದೇವತರ್ಪಣ ನೀಡಬೇಕು. ] ಓಂ ದೇವತಾಸ್ತರ್ಪಯಂತಿ । ಅಗ್ನಿಸ್ತೃಪ್ಯತು । ವಿಷ್ಣುಸ್ತೃಪ್ಯತು । ಪ್ರಜಾಪತಿ ಸ್ತೃಪ್ಯತು । ಬ್ರಹ್ಮಾ ತೃಪ್ಯತು । ವೇದಾಸ್ತೃಪ್ಯಂತು । ಋಷಯಸ್ತೃಪ್ಯಂತು । ಸರ್ವಾಣಿ ಛಂದಾಂಸಿ ತೃಪ್ಯಂತು । ಓಂಕಾರಸ್ತೃಪ್ಯತು । ವಷಟ್ಕಾರಸ್ತೃಪ್ಯತು । ವ್ಯಾಹೃತಯ ಸ್ತೃಪ್ಯಂತು । ಸಾವಿತ್ರೀ ತೃಪ್ಯತು । ಯಜ್ಞಾಸ್ತೃಪ್ಯಂತು । ದ್ಯಾವಾಪೃಥಿವ್ಯೌ ತೃಪ್ಯೇತಾಂ । ಅಂತರಿಕ್ಷಾಣಿ ತೃಪ್ಯಂತು । ಅಹೋರಾತ್ರಾಣಿ ತೃಪ್ಯಂತು। ಸಾಂಖ್ಯಾಃ ತೃಪ್ಯಂತು । ಸಿದ್ಧಾಃ ತೃಪ್ಯಂತು । ಸಮುದ್ರಾಃ ತೃಪ್ಯಂತು। ನದ್ಯಃ ತೃಪ್ಯಂತು ಗಿರಯಸ್ತೃಪ್ಯಂತು। ಕ್ಷೇತ್ರೌಷಧಿವನಸ್ಪತಿಗಂಧರ್ವಾಪ್ಸರಸ ಸ್ತೃಪ್ಯಂತು। ನಾಗಾಸ್ತೃಪ್ಯಂತು । ವಯಾಂಸಿತೃಪ್ಯಂತು । ಗಾವಃತೃಪ್ಯಂತು । ಸಾಧ್ಯಾಸ್ತೃಪ್ಯಂತು । ವಿಪ್ರಾಸ್ತೃಪ್ಯಂತು । ಯಕ್ಷಾಸ್ತೃಪ್ಯಂತು । ರಕ್ಷಾಂಸಿತೃಪ್ಯಂತು । ಭೂತಾನಿ ತೃಪ್ಯಂತು । ಏವಮಂತಾನಿ ತೃಪ್ಯಂತು ॥

**ಋಷಿತರ್ಪಣ** ನಿವೀತೀ ಋಷಿ ತೀರ್ಥದಿಂದ, ಎರಡೆರಡು ಬಾರಿ ಉಪಾ

ಕರ್ಮಾಂಗವಾಗಿ – [ ನಿವೀತೀ, ದ್ವಿವಾರಂ ಋಷಿ ತೀರ್ಥೇನ ] ಕಶ್ಯಪಂ ತರ್ಪಯಾಮಿ, ತರ್ಪಯಾಮಿ, ಅತ್ರಿಂ ತರ್ಪಯಾಮಿ, ತರ್ಪಯಾಮಿ, ಭರದ್ವಾಜಂ ತರ್ಪಯಾಮಿ, ತರ್ಪಯಾಮಿ, ವಿಶ್ವಾಮಿತ್ರಂ ತರ್ಪಯಾಮಿ, ತರ್ಪಯಾಮಿ, ಗೌತಮಂ ತರ್ಪಯಾಮಿ, ತರ್ಪಯಾಮಿ, ಜಮದಗ್ನಿಂ ತರ್ಪಯಾಮಿ, ತರ್ಪಯಾಮಿ, ವಸಿಷ್ಠಂ ತರ್ಪಯಾಮಿ, ತರ್ಪಯಾಮಿ, ಅರುಂಧತಿಂ ತರ್ಪಯಾಮಿ, ತರ್ಪಯಾಮಿ,[ ಇಲ್ಲಿಯವರೆಗೆ ಉಪಾಕರ್ಮಾಂಗ ಋಷಿತರ್ಪಣ ನಂತರ ಬ್ರಹ್ಮಯಜ್ಞಾಂಗ ದೇವತರ್ಪಣ ನೀಡಬೇಕು. ] ಓಂ ಶತರ್ಚಿನಸ್ತೃಪ್ಯಂತು । ಮಾಧ್ಯಮಾಸ್ತೃಪ್ಯಂತು । ಗೃತ್ಸಮದಸ್ತೃಪ್ಯತು । ವಿಶ್ವಾಮಿತ್ರ ಸ್ತೃಪ್ಯತು । ವಾಮದೇವಸ್ತೃಪ್ಯತು । ಅತ್ರಿಸ್ತೃಪ್ಯತು । ಭರದ್ವಾಜ ಸ್ತೃಪ್ಯತು । ವಸಿಷ್ಠಸ್ತೃಪ್ಯತು। ಪ್ರಗಾಥಾಸ್ತೃಪ್ಯತು । ಪಾವಮಾನ್ಯಸ್ತೃಪ್ಯಂತು । ಕ್ಷುದ್ರಸೂಕ್ತಾಸ್ತೃಪ್ಯಂತು । ಮಹಾಸೂಕ್ತಾಸ್ತೃಪ್ಯಂತು । ಸನಕಸ್ತೃಪ್ಯತು । ಸನಂದಸ್ತೃಪ್ಯತು। ಸನತ್ಸುಜಾತ ಸ್ತೃಪ್ಯತು । ಸನಾತನಸ್ತೃಪ್ಯತು । ಸನತ್ಕುಮಾರ ಸ್ತೃಪ್ಯತು। ಕಪಿಲಸ್ತೃಪ್ಯತು । ಓಘುರಿಸ್ತೃಪ್ಯತು । ಆಸುರೀ ತೃಪ್ಯತು । ಪಂಚ ಶಿಖಾಸ್ತೃಪ್ಯಂತು ।

**ಆಚಾರ್ಯ ತರ್ಪಣ** – ತಂದೆಯಿರುವವರು ಆಗ್ನೇಯಾಭಿಮುಖವಾಗಿ [ ಪೂರ್ವ ಮತ್ತು ದಕ್ಷಿಣದಿಕ್ಕುಗಳ ಮಧ್ಯದದಿಕ್ಕು ], ಉಪವೀತಿಯಾಗಿ, ತಂದೆಯಿಲ್ಲದವರು ಪ್ರಾಚೀನಾವೀತಿಯಾಗಿ ಪಿತೃತೀರ್ಥದಿಂದ ಮೂರುಮೂರುಬಾರಿ ನೀಡಬೇಕು. ಓಂ ಸುಮಂತುಜೈಮಿನಿ ವೈಶಂಪಾಯನ ಪೈಲಸೂತ್ರ ಭಾಷ್ಯಭಾರತ ಮಹಾಭಾರತ ಧರ್ಮಾಚಾರ್ಯಾ ಸ್ತೃಪ್ಯಂತು । ಜಾನಂತಿಬಾಹವಿ ಗಾರ್ಗ್ಯಗೌತಮಶಾಕಲ್ಯ ಬಾಭ್ರವ್ಯ ಮಾಂಡವ್ಯಮಾಂಡೂಕೇಯಾ ಸ್ತೃಪ್ಯಂತು । ಗಾರ್ಗೀವಾಚಕ್ನವೀತೃಪ್ಯತು। ವಡವಾಪ್ರಾತೀಥೇಯೀತೃಪ್ಯತು । ಸುಲಭಾಮೈತ್ರೇಯೀ ತೃಪ್ಯತು । ಕಹೋಳಂ ತರ್ಪಯಾಮಿ । ಕೌಷೀತಕಂ ತರ್ಪಯಾಮಿ । ಮಹಾಕೌಷೀತಕಂ ತರ್ಪಯಾಮಿ । [ ಭರದ್ವಾಜಂ ತರ್ಪಯಾಮಿ । ] ಪೈಂಗ್ಯಂತರ್ಪಯಾಮಿ। ಮಹಾಪೈಂಗ್ಯಂ ತರ್ಪಯಾಮಿ । ಸುಯಜ್ಞಂತರ್ಪಯಾಮಿ । ಸಾಂಖ್ಯಾಯನಂ ತರ್ಪಯಾಮಿ । ಐತರೇಯಂತರ್ಪಯಾಮಿ। ಮಹೈತರೇಯಂತರ್ಪಯಾಮಿ । ಶಾಕಲಂ ತರ್ಪಯಾಮಿ । ಬಾಷ್ಕಲಂ ತರ್ಪಯಾಮಿ । ಸುಜಾತವಕ್ತ್ರಂತರ್ಪಯಾಮಿ । ಔದವಾಹಿಂತರ್ಪಯಾಮಿ। ಮಹೌದವಾಹಿಂ ತರ್ಪಯಾಮಿ। ಸೌಜಾಮಿಂ ತರ್ಪಯಾಮಿ । ಶೌನಕಂ ತರ್ಪಯಾಮಿ । ಆಶ್ವಲಾಯನಂ ತರ್ಪಯಾಮಿ ।

ಯೇಚಾನ್ಯೇ ಆಚಾರ್ಯಾಸ್ತೇ ಸರ್ವೇತೃಪ್ಯಂತು ॥ **ಪಿತೃತರ್ಪಣ :** ದಕ್ಷಿಣಾಭಿ ಮುಖವಾಗಿ, ಪ್ರಾಚೀನಾವೀತಿಯಾಗಿ [ ಜನಿವಾರವನ್ನು ಎಡಕ್ಕೆವಾಕಿಕೊಂಡು] , ಪಿತೃತೀರ್ಥದಿಂದ , [ ಎಡಗಾಲನ್ನು ಹಿಂದೆ ಮಡಚಿ ಬಲಗಾಲಿನ, ಮಂಡಿಯೊಳಗೆ ಕೈ ಇರುವಂತೆ ] ನೀಡಬೇಕು. ತಿಲತರ್ಪಣ ನೀಡಿವರೇ, ರಾತ್ರಿಭೋಜನನಿಷಿದ್ಧವಾದ್ದರಿಂದ ನಿತ್ಯತಿಲತರ್ಪಣದ ಬದಲು ಬ್ರಹ್ಮಯಜ್ಞಾಂಗ ದ್ವಾದಶಪಿತೃಗಳಿಗೆ ಜಲತರ್ಪಣ ನೀಡುವುದು ಹೆಚ್ಚು ಆಚರಣೆಯಲ್ಲಿದೆ. ನಿತ್ಯತಿಲತರ್ಪಣನೀಡುವವರು ತರ್ಪಣವಿಧಿಯನ್ನು ಷಣ್ಣವತಿಶ್ರಾದ್ಧದಲ್ಲಿ ನೋಡಬೇಕು. ಋಗ್ವೇದಿಗಳಿಗೆ ಹೆಸರು, ಗೋತ್ರ, ರೂಪ ಕ್ರಮ. ಯಜುರ್ವೇದಿಗಳಿಗೆ ಗೋತ್ರ, ಹೆಸರು, ರೂಪ ಕ್ರಮ. ಮೂರು ಬಾರಿ ತರ್ಪಣ. ನಂತರ ಆಚಮನವಮಾಡಿ ಯಸ್ಯಸ್ಮೃತ್ಯಾದಿ ಮಂತ್ರದಿಂದ ಉಪಾಕರ್ಮಾಂಗತಯಾ ಕೃತ ತರ್ಪಣೇನ ಮನುನಾಮಕ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀವೇದವ್ಯಾಸ ಪ್ರೀಯತಾಂ ಪ್ರೀತೋವರದೋ ಭವತು ಶ್ರೀಕೃಷ್ಣಾರ್ಪಣಮಸ್ತು. ಎಂದು ಶ್ರೀಕೃಷ್ಣಾರ್ಪಣ ಬಿಡುವುದು.

## ೧೭. *ಗೋದಾನಾಂಗ ತರ್ಪಣ*

ವೈತರಣೀ ಗೋದಾನಾಂಗವಾಗಿ ತರ್ಪಣ ನೀಡುವ ಕ್ರಮವಿದೆ. ಇದನ್ನು ಗೋಪುಚ್ಛೋದಕ ತರ್ಪಣವೆನ್ನುತ್ತಾರೆ, ಅಷ್ಟನ್ನು ಮಾತ್ರ ಇಲ್ಲಿ ಸಂಗ್ರಹಿಸಲಾಗಿದೆ.

ಗೋ ಪ್ರಾರ್ಥನಾ – ಗಾವೋ ಮಮಾಗ್ರತಸ್ಸಂತು ಗಾವೋ ಮೇ ಸಂತು ಪೃಷ್ಠತಃ । ಗಾವೋ ಮೇ ಹೃದಯೇ ಸಂತು ಗವಾಂ ಮಧ್ಯೇ ವಸಾಮ್ಯಹ ಮ್ ॥ ಯಾ ಲಕ್ಷ್ಮೀಸ್ಸರ್ವಭೂತಾನಾಂ ಯಾ ಚ ದೇವೇಷ್ವವಸ್ಥಿತಾ । ಧೇನುರೂಪೇಣ ಸಾ ದೇವೀ ಮಮ ಶಾಂತಿಂ ಪ್ರಯಚ್ಛತು ॥ ದೇಹಸ್ಥಾ ಯಾ ಚ ರುದ್ರಾಣಿ ಶಂಕರಸ್ಯ ಸದಾ ಪ್ರಿಯೇ । ಧೇನುರೂಪೇಣ ಸಾ ದೇವೀ ಮಮ ಶಾಂತಿಂ ಪ್ರಯಚ್ಛತು ॥ ಎಂದು ಪ್ರಾರ್ಥಿಸಿ – ಗೋಪೃಷ್ಠದಲ್ಲಿ ಬಾಲವನ್ನು ಹಿಡಿದುಕೊಂಡು ತಿಲಸಹಿತ ತರ್ಪಣ ನೀಡುವುದೇ ಗೋಪುಚ್ಛೋದಕ ತರ್ಪಣ.

ದೇವಾಧಿದೇವತಾಶ್ಚೈವ ತಥಾ ಪ್ರತ್ಯಧಿದೇವತಾ । ಆದಿತ್ಯಾವಸವೋರುದ್ರಾಃ ವಿಶ್ವೇದೇವಾಃ ಮರುದ್ಗಣಾಃ । ತೇ ಸರ್ವೇ ತೃಪ್ತಿಮಾಯಾಂತು ಗೋಪುಚ್ಛೋದಕತರ್ಪಣೈಃ ॥೧॥ ಋಷಯೋ ಮಾನವಾ ಯೇ ಚ ಮೃತ್ಯೋಶ್ಚ ಯಮದೇವತಾಃ । ಆದಿತ್ಯಾವಸವೋರುದ್ರಾಃ ವಿಶ್ವೇದೇವಾಃ ಮರುದ್ಗಣಾಃ ।

ತೇ ಸರ್ವೇ ತೃಪ್ತಿಮಾಯಾಂತು ಗೋಪುಚ್ಛೋದಕತರ್ಪಣೈಃ ॥೨॥ ವಾಯುರ್ಜಲಾಂತರಿಕ್ಷಶ್ಚ ತಥೈವ ಚ ದಿವೌಕಸಃ । ತೇ ಸರ್ವೇ ತೃಪ್ತಿಮಾಯಾಂತು ಗೋಪುಚ್ಛೋದಕತರ್ಪಣೈಃ ॥೩॥ ಸ್ವಾಹಾ ಸ್ವಧಾ ತಥಾ ಲಕ್ಷ್ಮೀಃ ಪುಷ್ಟಿಃ ಶ್ರದ್ಧಾ ಸರಸ್ವತೀ । ಮೇಧಾಕೀರ್ತಿಸ್ತಥಾ ದೀಪ್ತಿಃ ಕೀರ್ತಿಶ್ಚೈವ ಸ್ವರೋಪಮಾ । ತೇ ಸರ್ವೇ ತೃಪ್ತಿಮಾಯಾಂತು ಗೋಪುಚ್ಛೋದಕತರ್ಪಣೈಃ ॥೪॥ ಗಂಧರ್ವಾಃ ಕಿನ್ನರಾಶ್ಚೈವ ಯೇ ಚಾನ್ಯೇಽಪ್ಸರಸಾಂ ಗಣಾಃ । ಪುಲಸ್ತ್ಯಃ ಪುಲಹಶ್ಚೈವ ಪ್ರಚೇತಾ ಭೃಗುರೇವ ಚ ॥ ವಸಿಷ್ಠಾಂಗೀರಸೌ ಚೈವ ಅತ್ರಿಃ ಪಾರಾಶರಸ್ತಥಾ । ತೇ ಸರ್ವೇ ತೃಪ್ತಿಮಾಯಾಂತು ಗೋಪುಚ್ಛೋದಕತರ್ಪಣೈಃ ॥೫॥ ಬ್ರಹ್ಮಲೋಕಂ ಗತಾ ಯೇ ಚ ವಿಷ್ಣುಲೋಕಂ ಗತಾಸ್ತಥಾ । ಶಿವಲೋಕ ಗತಾ ಯೇ ಚ ಯೇ ಚ ವೈವಸ್ವತಂ ಗತಾಃ । ತೇ ಸರ್ವೇ ತೃಪ್ತಿಮಾಯಾಂತು ಗೋಪುಚ್ಛೋದಕ ತರ್ಪಣೈಃ ॥೬॥ ಸನಕಃಸನಂದನಶ್ಚೈವ ಸನಾತನಸ್ತಥೈವ ಚ । ಕಪಿಲಾಶ್ಚಾಸುರಾಶ್ಚೈವ ವೋಢುಃ ಪಂಚಶಿಖಸ್ತಥಾ । ತೇ ಸರ್ವೇ ತೃಪ್ತಿಮಾಯಾಂತು ಗೋಪುಚ್ಛೋದಕ ತರ್ಪಣೈಃ ॥೭॥ ಕವ್ಯವಾಡನಲಃ ಸೋಮೋ ಯಮಶ್ಚೈವಾರ್ಯಮಾ ತಥಾ । ಅಗ್ನಿಷ್ವಾತ್ತಾಶ್ಚ ಪಿತರಃ ಸೋಮಪಾ ಆಜ್ಯಪಾಸ್ತಥಾ। ತೇ ಸರ್ವೇ ತೃಪ್ತಿಮಾಯಾಂತು ಗೋಪುಚ್ಛೋದಕತರ್ಪಣೈಃ ॥೮॥ ಔದುಂಬರಾಯ ದಧ್ನಾಯ ನೀಲಾಯ ಪರಮೇಷ್ಠಿನೇ । ವೃಕೋದರಾಯ ಚಿತ್ರಾಯ ಚಿತ್ರಗುಪ್ತಾಯ ವೈ ನಮಃ । ತೇ ಸರ್ವೇ ತೃಪ್ತಿಮಾಯಾಂತು ಗೋಪುಚ್ಛೋದಕತರ್ಪಣೈಃ ॥೯॥ ಪಿತಾ ಪಿತಾಮಹಾಶ್ಚೈವ ತಥೈವ ಪ್ರಪಿತಾಮಹಃ । ಮಾತಾ ಪಿತಾಮಹೀಶ್ಚೈವ ತಥೈವ ಪ್ರಪಿತಾಮಹೀ । ತೇ ಸರ್ವೇ ತೃಪ್ತಿಮಾಯಾಂತು ಗೋಪುಚ್ಛೋದಕತರ್ಪಣೈಃ ॥೧೦॥ ಮಾತಾಮಹಃ ಪ್ರಮಾತಾ ಚ ವೃದ್ಧಪ್ರಮಾತಾಮಹಸ್ತಥಾ । ಮಾತಾಮಹೀ ಪ್ರಮಾತಾ ಚ ವೃದ್ಧಪ್ರಮಾತಾಮಹೀ ತಥಾ । ತೇ ಸರ್ವೇ ತೃಪ್ತಿಮಾಯಾಂತು ಗೋಪುಚ್ಛೋದಕತರ್ಪಣೈಃ ॥೧೧॥ ಅಸಿಪತ್ರವನೇ ಘೋರೇ ಕುಂಭೀಪಾಕೇ ಚ ಯೇ ಸ್ಥಿತಾಃ। ವಿಯೋನಿಷು ಗತಾ ಯೇ ಚ ಬ್ರಹ್ಮಾಂಡೋದರಮಧ್ಯಗಾಃ । ತೇ ಸರ್ವೇ ತೃಪ್ತಿಮಾಯಾಂತು ಗೋಪುಚ್ಛೋದಕತರ್ಪಣೈಃ ॥೧೨॥ ವಿರೂಪಾ ಆಮಗರ್ಭಾಶ್ಚ ಜಾತಾಜಾತಾಃ ಕುಲೇ ಮಮ । ತೇ ಸರ್ವೇ ತೃಪ್ತಿಮಾಯಾಂತು ಗೋಪುಚ್ಛೋದಕತರ್ಪಣೈಃ ॥೧೩॥ ಪಿತೃವಂಶೇ ಮೃತಾ ಯೇ ಚ ಮಾತೃವಂಶೇ ಚ ಯೇ ಮೃತಾಃ। ಗುರುಶ್ವಶುರಬಂಧೂನಾಂ ಯೇ ಚಾನ್ಯೇ ಬಾಂಧವಾ ಮೃತಾಃ।

ಸ್ಥಾನಭ್ರಂಶಾನ್ ಮೃತಾ ಯೇ ಚ ಶಸ್ತ್ರಾಗ್ನಿ ವಿಷಬಂಧನಾತ್ । ತೇ ಸರ್ವೇ ತೃಪ್ತಿಮಾಯಾಂತು ಗೋಪುಚ್ಛೋದಕತರ್ಪಣೈಃ ॥೧೪॥ ಸಿಂಹಶ್ವಾಸ ನಿವಾಸೇಷು ಯೇ ಚ ಮೂತ್ರಪುರೀಷತಃ । ಸರ್ವೇ ದೇವಾಶ್ಚ ಮುನಯಃ ಸರ್ವೇ ವೈ ಮಾನವಾ ಜನಾಃ । ತೇ ಸರ್ವೇ ತೃಪ್ತಿಮಾಯಾಂತು ಗೋಪುಚ್ಛೋದಕತರ್ಪಣೈಃ ॥೧೫॥ [ ಅರ್ಥ – ಗೋವಿನಬಾಲದಲ್ಲಿ ಎಳ್ಳು ನೀರಿನಿಂದ ಬಿಟ್ಟ ತರ್ಪಣದಿಂದ ಈ ಎಲ್ಲರೂ ತೃಪ್ತಿಯನ್ನು ಹೊಂದಲಿಯೆಂದು ಹೇಳುತ್ತದೆ, ಅವರು ಯಾರ್‍ಯಾರೆಂದರೆ – ದೇವತೆಗಳು, ಅಧಿದೇವತೆಗಳು, ಪ್ರತ್ಯಧಿದೇವತೆಗಳು, ಆದಿತ್ಯರು, ವಸುಗಳು, ರುದ್ರರು, ವಿಶ್ವೇದೇವತೆಗಳು, ಮರುದ್ಗಣರು ॥ ೧॥ ಋಷಿಗಳು, ಮನುಷ್ಯರು, ಮೃತ್ಯು, ಯಮದೇವತೆ, ಆದಿತ್ಯರು, ವಸುಗಳು, ರುದ್ರರು, ವಿಶ್ವೇದೇವತೆಗಳು, ಮರುದ್ಗಣರು, ವಾಯು, ಜಲ, ಅಂತರಿಕ್ಷ, ಆಕಾಶದಲ್ಲಿರುವವರು ॥೩॥ ಸ್ವಾಹಾ, ಸ್ವಧಾ, ಲಕ್ಷ್ಮೀ, ಪುಷ್ಟಿ, ಶ್ರದ್ಧಾ, ಸರಸ್ವತೀ, ಮೇಧಾ, ಕೀರ್ತಿ, ದೀಪ್ತಿ, ಕೀರ್ತಿ, ಸ್ವರೋಪಮಾ ॥೪॥ ಗಂಧರ್ವರು, ಕಿನ್ನರರು, ಅಪ್ಸರಗಣಗಳು, ಪುಲಸ್ತ್ಯ, ಪುಲಹ, ಪ್ರಚೇತಾ, ಭೃಗು, ವಸಿಷ್ಠ, ಅಂಗೀರಸ, ಅತ್ರಿ, ಪರಾಶರ ॥೫॥ ಬ್ರಹ್ಮಲೋಕ,ವಿಷ್ಣುಲೋಕ, ಶಿವಲೋಕ, ವೈವಸ್ವತ [ಸೂರ್ಯ] ಲೋಕದಲ್ಲಿರುವವರು ॥೬॥ ಸನಕ, ಸನಂದನ, ಸನಾತನ, ಕಪಿಲ, ಅಸುರ, ವೋಢು, ಪಂಚಶಿಖ ॥೭॥ ಕವ್ಯವಾಹ, ಅನಲಃ ಸೋಮ, ಯಮ, ಆರ್ಯಮಾ, ಅಗ್ನಿಷ್ವಾತ್ತ, ಸೋಮಪಾ, ಆಜ್ಯಪಾರೆಂಬ ಪಿತೃಗಳು ॥೮॥ ಔದುಂಬರ, ದಧ್ನ, ನೀಲ, ಪರಮೇಷ್ಠಿ, ವೃಕೋದರ, ಚಿತ್ರ, ಚಿತ್ರಗುಪ್ತ ॥೯॥ ಪಿತಾ ಪಿತಾಮಹ, ಪ್ರಪಿತಾಮಹ, ಮಾತಾ, ಪಿತಾಮಹೀ, ಪ್ರಪಿತಾಮಹೀ ॥೧೦॥ ಮಾತಾಮಹ, ಪ್ರಮಾತಾ, ವೃದ್ಧಪ್ರಮಾತಾಮಹ, ಮಾತಾಮಹೀ, ಪ್ರಮಾತಾ, ವೃದ್ಧಪ್ರಮಾತಾಮಹೀ ॥೧೧॥ ಘೋರವಾದ ಅಸಿಪತ್ರವನ, ಕುಂಭೀಪಾಕವೆಂಬ ನರಕದಲ್ಲಿರುವವರು ಪಿಯೋನಿಷು [ ಮನುಷ್ಯಜನ್ಮದಲ್ಲಿದ್ದು ಪಾಪದಿಂದ ಅನ್ಯ ಪ್ರಾಣಿಜನ್ಮಗಳಲ್ಲಿರುವವರು], ಬ್ರಹ್ಮಾಂಡೋದರಮಧ್ಯದಲ್ಲಿರುವವರು ॥೧೨॥ ವಿರೂಪಾ[ ಭೂತ, ಪಿಶಾಚಾದಿ ವಿರೂಪರು ] , ಧಾನ್ಯಾದಿಗರ್ಭದಲ್ಲಿರುವವರು, ನಮ್ಮ ಕುಲದಲ್ಲಿ ಹುಟ್ಟಿದವರು, ಹುಟ್ಟದೇ ಇರುವವರು ॥೧೩॥ ಪಿತೃವಂಶದಲ್ಲಿ ಮೃತರಾದವರು, ಮಾತೃವಂಶದಲ್ಲಿ ಮೃತರಾದವರು, ಹಾಗೂ ಮೃತರಾದ ಗುರುಗಳು, ಹೆಣ್ಣುಕೊಟ್ಟ ಮಾವ, ಆತ್ಮಬಂಧುಗಳು, ಅನ್ಯ ಸಂಬಂಧಿಗಳು । ಸ್ಥಾನಭ್ರಷ್ಟರು, ಶಸ್ತ್ರ, ಅಗ್ನಿ , ವಿಷ, ಬಂಧನದಿಂದ ಮೃತರಾದವರು ॥೧೪॥

ಸಿಂಹ, ನಾಯಿ ಜನ್ಮ, ಅಮೇಧ್ಯಾದಿ ಹೀನ ವಸ್ತುಗಳಲ್ಲಿ ಕೃಮಿಗಳಾಗಿರುವವರು, ಅದಲ್ಲದೆ ಎಲ್ಲಾ ದೇವ, ಋಷಿ, ಮನುಷ್ಯರು ॥೧೫॥ [ ಗೋವಿನಬಾಲದಲ್ಲಿ ಎಳ್ಳು ನೀರಿನಿಂದ ಬಿಟ್ಟ ತರ್ಪಣದಿಂದ ಈ ಎಲ್ಲರೂ ತೃಪ್ತಿಯನ್ನು ಹೊಂದಲಿ]

## ೧೮. ಷಣ್ಣವತೀ ಶ್ರಾದ್ಧಾಂಗ ತರ್ಪಣ

[೧] ಅಮಾವಾಸ್ಯೆ [ದರ್ಶ] – ೧೨ , [೨] ಯುಗಾದಿಗಳು – ೪, [೩] ಮನ್ವಾದಿಗಳು – ೧೪, [೪] ಸಂಕ್ರಾಂತಿಗಳು – ೧೨, [೫] ಮಹಾಲಯ [ಪಿತೃಪಕ್ಷ] – ೧೫ , [೬] ಅನ್ವಷ್ಟಕಗಳು– ೧೫, [೭] ವ್ಯತೀಪಾತ– [೧೨] ಮತ್ತು ವೈಧೃತಿ– [೧೨] ಯೋಗಗಳು ಸೇರಿ – ೨೪ ಒಟ್ಟು ತೊಂಭತ್ತಾರು ದಿನಗಳನ್ನು ಷಣ್ಣವತೀ ಶ್ರಾದ್ಧದಿನಗಳೆಂದಿದ್ದಾರೆ.

### [೧]. ಅಮಾವಾಸ್ಯೆ [ದರ್ಶ] – ೧೨

ಶ್ರೀ ಪರಾಶರ ಉವಾಚ– ಮೈತ್ರೇಯ ಶ್ರೂಯತಾಮೇತದ್ಯದ್ ಭವಾನ್‌ಪರಿಪೃಚ್ಛತಿ। ಯಥಾ ಸಪ್ತಗಣೇಽಪ್ಯೇಕಃ ಪ್ರಾಧಾನ್ಯೇನಾಧಿಕೋ ರವಿಃ ॥೬॥ ಸರ್ವಶಕ್ತಿಃ ಪರಾವಿಷ್ಣೋಋಗ್ಯಜುಃ ಸಾಮಸಂಜ್ಞಿತಾ । ಸೈಷಾ ತ್ರಯೀ ತಪತ್ಯಂಹೋ ಜಗತಶ್ಚ ಹಿನಸ್ತಿ ಯಾ ॥೭॥ ಸೈಷಾ ವಿಷ್ಣುಃಸ್ಥಿತಃ ಸ್ಥಿತ್ಯಾಂ ಜಗತಃ ಪಾಲನೋದ್ಯತಃ । ಋಗ್‌ಯಜುಃಸಾಮ ಭೂತೋಽಂತಃ ಸವಿತುರ್ದ್ವಿಜ ತಿಷ್ಠತಿ ॥೮॥ ಮಾಸಿಮಾಸಿ ರವಿರ್ಯೋ ಯಸ್ತತ್ರ ತತ್ರ ಹಿ ಸಾ ಪರಾ । ತ್ರಯೀಮಯೀ ವಿಷ್ಣುಶಕ್ತಿರವಸ್ಥಾನಂ ಕರೋತಿ ವೈ ॥೯॥ ಋಚಃ ಸ್ತುವಂತಿ ಪೂರ್ವಾಹ್ನೇ ಮಧ್ಯಾಹ್ನೇಽಥ ಯಜೂಂಷಿ ವೈ। ಬೃಹದ್ರಥಂತರಾದೀನಿ ಸಾಮಾನ್ಯಹ್ನಃ ಕ್ಷಯೇ ರವಿಂ ॥೧೦॥ ....... ಏವಂ ಸಾ ವೈಷ್ಣವೀ ಶಕ್ತಿರ್ನೈವಾಪೈತಿ ತತೋ ದ್ವಿಜ। ಮಾಸಾನುಮಾಸಂ ಭಾಸ್ವಂತಮಧ್ಯಾಸ್ತೇ ತತ್ರ ಸಂಸ್ಥಿತಂ ॥೨೦॥ ಪಿತೃದೇವ ಮನುಷ್ಯಾದೀನ್ ಸ ಸದಾಪ್ಯಾಯಯನ್ ಪ್ರಭುಃ । ಪರಿವರ್ತತ್ಯಹೋರಾತ್ರಕಾರಣಂ ಸವಿತಾ ದ್ವಿಜ ॥೨೧॥ ಸೂರ್ಯರಶ್ಮಿಃ ಸುಷುಮ್ನಾ ಯಸ್ತರ್ಪಿತಸ್ತೇನ ಚಂದ್ರಮಾಃ। ಕೃಷ್ಣಪಕ್ಷೇಽಮರ್ತ್ಯೈಃ ಶಶ್ವತ್ ಪೀಯತೇ ವೈ ಸುಧಾಮಯಃ ॥೨೨॥ ಪೀತಂ

ತಂ ದ್ವಿಕಲಂ ಸೋಮಂ ಕೃಷ್ಣಪಕ್ಷಕ್ಷಯೇ ದ್ವಿಜ । ಪಿಬಂತಿ ಪಿತರಸ್ತೇಷಾಂ ಭಾಸ್ಕರಾತ್ತರ್ಪಣಂ ತಥಾ ॥೨೩॥ ಆದತ್ತೇ ರಶ್ಮಿಭಿರ್ಯಂತು ಕ್ಷಿತಿಸಂಸ್ಥಂ ರಸಂ ರವಿಃ । ತಮುತ್ಸೃಜತಿ ಭೂತಾನಾಂ ಪುಷ್ಟ್ಯರ್ಥಂ ಸಸ್ಯವೃದ್ಧಯೇ ॥೨೪॥ ತೇನ ಪ್ರೀಣಾತ್ಯಶೇಷಾಣಿ ಭೂತಾನಿ ಭಗವಾನ್ ರವಿಃ । ಪಿತೃ ದೇವ ಮನುಷ್ಯಾದೀನೇವಮಾಪ್ಯಾಯಯತ್ಯಸೌ ॥೨೫॥ ಪಕ್ಷತೃಪ್ತಿಂ ತು ದೇವಾನಾಂ ಪಿತೄಣಾಂ ಚೈವ ಮಾಸಿಕೀಂ । ಶಶ್ವತ್ತೃಪ್ತಿಂ ಚ ಮರ್ತ್ಯಾನಾಂ ಮೈತ್ರೇಯಾರ್ಕಃ ಪ್ರಯಚ್ಛತಿ ॥೨೬॥ [ ಶ್ರೀ ವಿಷ್ಣುಪುರಾಣ ದ್ವಿತೀಯಾಂಶ ಅಧ್ಯಾಯ ೧೧.] ಪರಾಶರರ ಹಾಗೂ ಮೈತ್ರೇಯರ ಸಂವಾದ ರೂಪದಲ್ಲಿರುವ ಮೇಲಿನ ಶ್ಲೋಕಕಗಳ ಒಟ್ಟು ಅಭಿಪ್ರಾಯ ಶ್ರೀವಿಷ್ಣುವು ಋಗ್ಯಜುಃ ಸಾಮ ರೂಪನಾಗಿ ಸೂರ್ಯನಲ್ಲಿದ್ದು ಜಗತ್ತಿನ ಎಲ್ಲಾ ಆಗುಹೋಗುಗಳಿಗೂ ಕಾರಣನಾಗಿರುತ್ತಾನೆ. ವೈಷ್ಣವೀ ಶಕ್ತಿಯಿಂದ ಸೂರ್ಯನಲ್ಲಿದ್ದು ಪಿತೃ, ದೇವ, ಮನುಷ್ಯರನ್ನು ತೃಪ್ತಿಗೊಳಿಸುತ್ತಿರುತ್ತಾನೆ. ಶುಕ್ಲಪಕ್ಷದಲ್ಲಿ ಸುಷುಮ್ನಾವೆಂಬ ಸೂರ್ಯರಶ್ಮಿಯು ಚಂದ್ರನನ್ನು ವರ್ಧಿಸುತ್ತದೆ. ಈ ಸುಧಾಮಯನಾದ ಚಂದ್ರನನ್ನು ಕೃಷ್ಣಪಕ್ಷದಲ್ಲಿ ದೇವತೆಗಳು ಕಲೆಯ ರೂಪದಲ್ಲಿ ಕುಡಿಯುತ್ತಾರೆ. ಕೃಷ್ಣಪಕ್ಷದ ಕೊನೆಯ ಎರಡು ಕಲೆಗಳಿದ್ದಾಗ ಅಂದರೆ ಚತುರ್ದಶಿಯು ಕಳೆದಾಗ ಅಮಾವಾಸ್ಯೆಯಂದು ಚಂದ್ರನನ್ನು ಪಿತೃಗಳು ಕುಡಿಯುತ್ತಾರೆ. ಈ ರೀತಿ ಪಿತೃಗಳು ಸೂರ್ಯನಿಂದ ತೃಪ್ತಿ ಹೊಂದುತ್ತಾರೆ. ಜಲವನ್ನು ಹೀರಿ ಸೂರ್ಯ ಮಳೆಯ ರೂಪದಿಂದ ಸಮಸ್ತ ಪ್ರಾಣಿಗಳಿಗೂ ತೃಪ್ತಿಯನ್ನುಂಟುಮಾಡುತ್ತಾನೆ. ಹೀಗೆ ದೇವ, ಪಿತೃ, ಮರ್ತ್ಯರ ತೃಪ್ತಿಯಾಗುತ್ತದೆ. ದೇವತೆಗಳಿಗೆ ಒಂದು ಪಕ್ಷಕಾಲದಲ್ಲಿ ತೃಪ್ತಿ, ಪಿತೃಗಳಿಗೆ ಮಾಸಕ್ಕೊಮ್ಮೆ [ಅಮಾವಾಸ್ಯೆ] ತೃಪ್ತಿ, ಹಾಗೂ ಮರಣಶೀಲವುಳ್ಳ ಮರ್ತ್ಯರಿಗೆ ಸದಾತೃಪ್ತಿ ಸೂರ್ಯನಲ್ಲಿದ್ದು ವಿಷ್ಣುವು ನೀಡುತ್ತಾನೆ. [ ಕಲಾ ಕಾಷ್ಠ ನಿಮೇಷಾದಿ ಕಾಲಜ್ಞಾನಾತ್ಮರೂಪಿಣೇ । ಧ್ಯೇಯಾಯ ವಿಷ್ಣುರೂಪಾಯ ಪರಮಾಕ್ಷರರೂಪಿಣೇ ॥ ೧೭॥ ಬಿಭರ್ತಿಯಸ್ಸುರಗಣಾನಾಪ್ಯಾಯೇಂದುಂ ಸ್ವರಶ್ಮಿಭಿಃ । ಸ್ವಧಾಮೃತೇನ ಚ ಪಿತೄಂಸ್ತಸ್ಮೈ ತೃಪ್ತಾತ್ಮನೇ ನಮಃ ॥ ] ಪಿತೃಗಳಿಗೆ ಸ್ವಧಾಮೃತದಿಂದ ಪರಮಾಕ್ಷರರೂಪನಾದ ವಿಷ್ಣು ತೃಪ್ತಿಯನ್ನುಂಟುಮಾಡುತ್ತಾನೆ ಎನ್ನುವುದರಿಂದ ಶ್ರಾದ್ಧದ ಮುಖ್ಯ ನಿಯಾಮಕ ವಿಷ್ಣುವೆಂಬುದು ವಿಷ್ಣುಪುರಾಣ ತೃತೀಯಾಂಶ, ಅಧ್ಯಾಯ ೫ರಿಂದಲೂ ತಿಳಿದುಬರುತ್ತದೆ. [ ಅಮಾವಾಸ್ಯಾ ತಥಾ ತತ್ರ ಪಿತೄಣಾಂ ತೃಪ್ತಿಕಾರಿಣೀ। ತಸ್ಯಾಮಪಿ ಕೃತಶ್ರಾದ್ಧಮಕ್ಷಯ್ಯಂ ಪಿತೃತೃಪ್ತಿಕಂ ॥ ]

ಅಮಾವಾಸ್ಯೆಯು ಮಿಕ್ಕಶ್ರಾದ್ಧ ತಿಥಿಗಳಂತೆಯೇ ಪಿತೃಗಳಿಗೆ ತೃಪ್ತಿಯನ್ನುಂಟು ಮಾಡುವುದಾಗಿದೆ. ಅಂದು ಮಾಡಿದ ಶ್ರಾದ್ಧದಿಂದ ಪಿತೃಗಳಿಗೆ ತೃಪ್ತಿಯುಂಟಾಗಿ ಅಕ್ಷಯಫಲ ನೀಡುತ್ತದೆ. ಚೈತ್ರಾದಿ ಫಾಲ್ಗುಣ ಪರ್ಯಂತ ಕೃಷ್ಣಪಕ್ಷದ ಕೊನೆಯ ತಿಥಿಯೇ ಅಮಾವಾಸ್ಯೆ. ಅಂದು ಪಿತೃಗಳು ಭೂಮಿಗೆ ಅಭಿಮುಖರಾಗಿರುತ್ತಾರೆ. ಆದ್ದರಿಂದ ಅಂದಿನ ಪಿತೃಕಾರ್ಯ ಶ್ರೇಯಸ್ಕರ. ಒಂದು ಸಂವತ್ಸರದಲ್ಲಿ ೧೨ ಅಮಾವಾಸ್ಯೆಗಳು ಬರುತ್ತವೆ. ಅಂದು ಕೊನೆಯ ಪಕ್ಷ ದ್ವಾದಶ ಪಿತೃಗಳನ್ನು ಉದ್ದೇಶಿಸಿ ತರ್ಪಣ ನೀಡಬೇಕು.

## [೨] ಯುಗಾದಿಗಳು – ೪

ಶ್ರೀ ವರಾಹ ಉವಾಚ–ಶುಕ್ಲಾ ತೃತೀಯಾ ವೈಶಾಖೇ [೧] , ಪ್ರೇತಪಕ್ಷೇ ತ್ರಯೋದಶೀ [೨] । ಕಾರ್ತೀಕೇ ನವಮೀ ಶುಕ್ಲಾ [೩] , ಮಾಘಮಾಸೇ ತು ಪೂರ್ಣಿಮಾ [೪] ॥ ಏತಾ ಯುಗಾದಯಃ ಪ್ರೋಕ್ತಾ ದತ್ತಸ್ಯಾಕ್ಷಯಕಾರಕಾಃ। [ ವರಾಹಪುರಾಣ ಚಾ. ಮಾಸ. ಮ. ಅ. ೧೮] ವೈಶಾಖ ಶುದ್ಧ ತದಿಗೆ, ಭಾದ್ರಪದ ಕೃಷ್ಣಪಕ್ಷದ ತ್ರಯೋದಶೀ, ಕಾರ್ತೀಕ ಶುದ್ಧ ನವಮೀ,
ಹಾಗೂ ಮಾಘಮಾಸದ ಹುಣ್ಣಿಮೆ ಈ ನಾಲ್ಕೂ ಯುಗಾದಿಗಳು.

## [೩] ಮನ್ವಾದಿಗಳು – ೧೪

ಮನ್ವಾದೀಂಶ್ಚ ಪ್ರವಕ್ಷ್ಯಾಮಿ ಶೃಣುದೇವಿ ಸಮಾಹಿತಾ । ಆಶ್ವಯುಕ್ ಶುಕ್ಲ ನವಮೀ [೧] , ಕಾರ್ತೀಕೇ ದ್ವಾದಶೀ ಸಿತಾ [೨] ॥ ಶ್ರಾವಣಸ್ಯಾಷ್ಟಮೀ ತೃತೀಯಾ ಚೈತ್ರಮಾಸಸ್ಯ ಸಿತಾ [೩] , [ ಸಿತಾ] ಭಾದ್ರಪದಸ್ಯ ಚ [೪] । ಆಷಾಢೇ ದಶಮೀ ಶುಕ್ಲಾ [೫] , ಮಾಘೇಸ್ಯಾತ್ ಶುಕ್ಲ ಸಪ್ತಮೀ [೬] । ತೃತೀಯಾ ಚೈತ್ರಮಾಸಸ್ಯ ಸಿತಾ [೩] , [ ಸಿತಾ] ಭಾದ್ರಪದಸ್ಯ ಚ [೪] । ಆಷಾಢೇ ದಶಮೀ ಶುಕ್ಲಾ [೫] , ಮಾಘೇಸ್ಯಾತ್ ಶುಕ್ಲ ಸಪ್ತಮೀ [೬] । ಕೃಷ್ಣಾ [೭] ತಥಾ [ ಕೃಷ್ಣಪಕ್ಷದಂತೆ ] ಆಷಾಢೀ ತು ಪೂರ್ಣಿಮಾ [೮] ॥ ಶ್ರಾವಣಸ್ಯತ್ವ ಮಾವಾಸ್ಯಾ [೯] , ಪುಷ್ಯೈಕಾದಶೀ ಸಿತಾ [೧೦] । ಕಾರ್ತಿಕೀ [೧೧] , ಫಾಲ್ಗುನೀ

[೧೨] , ಚೈತ್ರೀ [೧೩] , ಜ್ಯೇಷ್ಠೀ [೧೪] , ಪಂಚದಶೀ ಸಿತಾ ।। ಮನ್ವಂತರಾದಯಶ್ಚೈತಾ ದತ್ತಸ್ಯಾಕ್ಷಯಕಾರಕಾಃ । ಪಿತ್ರ್ಯನುದ್ದಿಶ್ಯ ಕುರ್ವೀತ ಸ್ನಾನದಾನ ದ್ವಿಜಾರ್ಚನಂ।। [ ವರಾಹಪುರಾಣ ಚಾ. ಮಾಸ. ಮ. ಅ. ೧೮. ]

ಮೇಲಿನ ಮನ್ವಾದಿಗಳು ಮಾಸಾನುಕ್ರಮದಲ್ಲಿ ೧. ಚೈತ್ರಶುದ್ಧ ತೃತೀಯಾ, ೨. ಚೈತ್ರ ಹುಣ್ಣಿಮೆ, ೩. ಜ್ಯೇಷ್ಠ ಹುಣ್ಣಿಮೆ, ೪. ಆಷಾಢ ಶುದ್ಧ ದಶಮೀ, ೫. ಆಷಾಢ ಪೂರ್ಣಿಮೆ, ೬. ಶ್ರಾವಣ ಬಹುಳ ಅಷ್ಟಮೀ, ೭. ಶ್ರಾವಣ ಅಮಾವಾಸ್ಯೆ, ೮. ಭಾದ್ರಪದ ಶುದ್ಧ ತೃತೀಯಾ, ೯. ಆಶ್ವಯುಜ ಶುದ್ಧನವಮೀ [ಮಹಾನವಮೀ] ೧೦. ಕಾರ್ತೀಕ ಶುದ್ಧ ದ್ವಾದಶೀ, ೧೧. ಕಾರ್ತೀಕ ಹುಣ್ಣಿಮೆ, ೧೨. ಪುಷ್ಯ ಶುದ್ಧ ಏಕಾದಶೀ, ೧೩. ಮಾಘ ಶುದ್ಧ ಸಪ್ತಮೀ [ ರಥಸಪ್ತಮೀ] , ೧೪. ಫಾಲ್ಗುಣ ಹುಣ್ಣಿಮೆ ಸೇರಿ ಒಟ್ಟು ಹದಿನಾಲ್ಕು ದಿನಗಳು ಮನ್ವಾದಿಗಳು. ನಾವು ನೀಡಿದ್ದಕ್ಕೆ ಅಕ್ಷಯಫಲ [ ಎಂದೂ ನಾಶವಾಗದ] ನೀಡುವ ಈ ಮನ್ವಂತರಾದಿಗಳಲ್ಲಿ ಪಿತೃಗಳನ್ನು ಉದ್ದೇಶಿಸಿ ಸ್ನಾನ, ದಾನ, ದ್ವಿಜಾರ್ಚನೆ [ಶ್ರಾದ್ಧದಿಂದ] ಮಾಡಬೇಕು.

## [೪] ಸಂಕ್ರಾಂತಿಗಳು – ೧೨

ಮೇಷಾದಿಯಾಗಿ ಮೀನಪರ್ಯಂತ ಸೂರ್ಯನ ರಾಶಿ ಪ್ರವೇಶವೇ ಸಂಕ್ರಾಂತಿಗಳು. ಅವು ದ್ವಾದಶರಾಶಿಗಳಿಗೆ ಅನುಗುಣವಾಗಿ ಹನ್ನೆರಡು ಸಂಕ್ರಾಂತಿಗಳಾಗುತ್ತವೆ. ವೃದ್ಧವಸಿಷ್ಠರ ಪ್ರಕಾರ ಸಂಕ್ರಾಂತಿಗಳು – ಅಯನೇ ದ್ವೇ ಚ ವಿಷುವೇ ಚತಸ್ರಃ ಷಡಶೀತಯಃ । ಚತಸ್ರೋ ವಿಷ್ಣುಪದ್ಯಶ್ಚ ಸಂಕ್ರಾಂತ್ಯೋ ದ್ವಾದಶ ಸ್ಮೃತಾಃ ।। ಮೃಗಕರ್ಕಟಸಂಕ್ರಾಂತೀ ದ್ವೇ ತು ಉದಗ್‌ದಕ್ಷಿಣಾಯನೇ। ವಿಷುವೇ ತು ತುಲಾಮೇಷೌ ಗೋಳಮಧ್ಯೇ ತತಃ ಪರಾಃ ।। ಕನ್ಯಾಯಾಂ ಮಿಥುನೇ ಮೀನೇ ಧನುಷ್ಯಪಿ ರವೇರ್ಗತಿಃ। ಷಡಶೀತಿಮುಖಾಃ ಪ್ರೋಕ್ತಾಃ ಷಡಶೀತಿಗುಣಾಃ ಫಲೈಃ ।। ವೃಷವೃಶ್ಚಿಕಕುಂಭೇಷು ಸಿಂಹೇ ಚೈವ ರವೇರ್ಗತಿಃ ಯತ್ತು ವಿಷ್ಣುಪದಂ ನಾಮ ವೈಷ್ಣವಾದಧಿಕಂ ಫಲಂ ।। ಇತಿ. ಅರ್ಥ – ಉತ್ತರಾಯಣ, ದಕ್ಷಿಣಾಯನ ಎಂಬ ಎರಡು ಅಯನಗಳು. ವಿಷುವ ಸಂಕ್ರಾಂತಿಗಳೆರಡು, ಷಡಶೀತಿ ಸಂಕ್ರಾಂತಿಗಳು ನಾಲ್ಕು, ವಿಷ್ಣುಪದೀ ಸಂಕ್ರಾಂತಿಗಳು ನಾಲ್ಕು, ಒಟ್ಟು ಹನ್ನೆರಡು ಸಂಕ್ರಾಂತಿಗಳು. ಇವುಗಳ ವಿವರ, ಮಕರಸಂಕ್ರಾತಿ

ಉತ್ತರಾಯಣ, ಕರ್ಕಾಟಕ ಸಂಕ್ರಾಂತಿ ದಕ್ಷಿಣಾಯನ, ಭೂಮಧ್ಯರೇಖೆಯಲ್ಲಿ ಆಗುವ ತುಲಾಮೇಷ ಸಂಕ್ರಾಂತಿಗಳು ವಿಷುವ ಸಂಕ್ರಾಂತಿಗಳು, ಕನ್ಯಾ, ಮಿಥುನ, ಮೀನ, ಧನುರ್ ರಾಶಿಗಳ ಸಂಕ್ರಾಂತಿಗಳು ಷಡಶೀತಿಗಳು. ಷಡಶೀತಿಗುಣ ಎಂದರೆ ೮೬ಪಟ್ಟು ಹೆಚ್ಚಿನಫಲವುಳ್ಳವು ಈ ನಾಲ್ಕು ಸಂಕ್ರಾಂತಿಗಳು. ವೃಷಭ, ವೃಶ್ಚಿಕ, ಕುಂಭ, ಸಿಂಹರಾಶಿಗಳ ಸಂಕ್ರಾಂತಿ ವಿಷ್ಣುಪದೀಯೆನಿಸಿದೆ. ಈ ನಾಲ್ಕು ವೈಷ್ಣವ ಸಂಕ್ರಾಂತಿಯೆನಿಸಿ ಹೆಚ್ಚು ಫಲವುಳ್ಳದ್ದಾಗಿದೆ.

## [೫] ಮಹಾಲಯ [ಪಿತೃಪಕ್ಷ] – ೧೫

ಭಾದ್ರಪದ ಕೃಷ್ಣಪಕ್ಷದ ಹದಿನೈದುದಿನಗಳು ಪಿತೃಗಳನ್ನು ಉದ್ದೇಶಿಸಿ ತರ್ಪಣ ನೀಡಬೇಕು. ವರಾಹಪುರಾಣ ಚಾ. ಮಾಸ. ಮಹಾತ್ಮೆಯಲ್ಲಿ ಮಹಾಲಯದಲ್ಲಿ ವ್ಯತೀಪಾತ ಹಾಗೂ ವೈಧೃತಿಯೋಗವಿದ್ದಾಗ, ಮೇಷಾದಿ ಸಂಕ್ರಾಂತಿಗಳಂದು ನಿಷಿದ್ಧ ದಿನವಿದ್ದರೂ ತಿಲದಿಂದ ಕೂಡಿರುವ ತರ್ಪಣವನ್ನು ನೀಡಬೇಕೆಂದಿದೆ. [ ಪ್ರೇತಪಕ್ಷೇ ವ್ಯತೀಪಾತೇ ಸಂಕ್ರಾಂತೌ ವೈಧೃತಾವಪಿ । ನಿಷಿದ್ಧೇಽಪಿ ದಿನೇ ಕುರ್ಯಾತ್ ತಿಲಯುಕ್ತಂ ತು ತರ್ಪಣಂ ॥ ] ತೀರ್ಥೇ ತಿಥಿವಿಶೇಷೇ ಚ ಗಯಾಯಾಂ ಪ್ರೇತಪಕ್ಷಕೇ। ನಿಷಿದ್ಧೇಽಪಿ ದಿನೇ ಕುರ್ಯಾತ್‌ತರ್ಪಣಂ ತು ತಿಲೈಃ ಸಹ ॥ ಎಂಬ ಸ್ಮೃತಿವಾಕ್ಯ ಸಹ ಮಹಾಲಯದಲ್ಲಿ ತಿಲತರ್ಪಣವನ್ನು ವಿಧಿಸುತ್ತದೆ. ಕಾರ್ಷ್ಣಾಜಿನಿಗಳು ಭಾದ್ರಪದದ ಕೃಷ್ಣಪಕ್ಷದಲ್ಲಿ ಪ್ರತಿದಿನ ಶ್ರಾದ್ಧವನ್ನು ಮಾಡಬೇಕು. ನಂದಾದಿ ತಿಥಿಗಳು, ಮತ್ತು ಚತುರ್ದಶೀ ಶ್ರಾದ್ಧ ವರ್ಜ್ಯವಲ್ಲವೆಂದಿದ್ದಾರೆ. [ ನಭಸ್ಯಾಪರೇ ಪಕ್ಷೇ ಶ್ರಾದ್ಧಂ ಕಾರ್ಯಂ ದಿನೇ ದಿನೇ। ನೈವ ನಂದಾದಿ ವರ್ಜ್ಯಂ ಸ್ಯಾನ್ನೈವ ನಿಂದ್ಯಾ ಚತುರ್ದಶೀ॥ ] ಆದ್ದರಿಂದ ಪಿತೃಪಕ್ಷದಲ್ಲಿ ತನ್ನ ಪಿತೃಗಳ ಮೃತತಿಥಿಯಲ್ಲಿ ಶ್ರಾದ್ಧಮಾಡಿದರೂ ಉಳಿದ ದಿನಗಳಂದು ಅಧಿಕಾರಿಯು ತರ್ಪಣ ನೀಡಬೇಕು.

## [೬] ಅನ್ವಷ್ಟಕಗಳು – ೧೫

ಮಾರ್ಗಶಿರ, ಪುಷ್ಯ, ಮಾಘ, ಫಾಲ್ಗುಣ, ಮತ್ತು ಭಾದ್ರಪದ ಈ ಐದು ಮಾಸಗಳ ಕೃಷ್ಣಪಕ್ಷದ [ಬಹುಳದ] ಅಷ್ಟಮೀ ತಿಥಿ, ಅಷ್ಟಕವೆಂದೂ, ಅಷ್ಟಮೀ ತಿಥಿಯ ಹಿಂದಿನ ತಿಥಿಯಾದ ಸಪ್ತಮೀ, ಇದರೊಂದಿಗೆ ಅಷ್ಟಮೀ ತಿಥಿಯ ಮುಂದಿನ ತಿಥಿಯಾದ ನವಮೀ ಮೂರು ತಿಥಿಗಳು ಸೇರಿ ಪತ್ತು ತಿಥಿಗಳು

ಅನ್ವಷ್ಟಕಗಳೆಂದು, ಒಟ್ಟು ಈ ಐದು ಮಾಸಕ್ಕೆ ಹದಿನೈದು ದಿನಗಳು ಅಷ್ಟಕ ಹಾಗೂ ಅನ್ವಷ್ಟಕಗಳೆಂದು ಕರೆಯಲ್ಪಡುತ್ತವೆ. ಇವು ಪಿತೃಕಾರ್ಯದಲ್ಲಿ ಮಹಾಫಲವುಳ್ಳದ್ದಾಗಿದೆ. [ ಮಾರ್ಗಶೀರ್ಷಾದಿ ಮಾಸಾನಾಂ ಚತುರ್ಣಾಂ ಕೃಷ್ಣ ಪಕ್ಷಜಾಃ । ನಭಸ್ಯೇ ಪ್ರೇತಪಕ್ಷೇಪಿ ಪಂಚಾಷ್ಟಮ್ಯೋಷ್ಟಕಾಭಿಧಾಃ ॥ ತಾಸಾಂ ಪೂರ್ವಾಪರಂ ಚೇತಿ ದಿನದ್ವಯಮಪಿ ದ್ವಿಜ । ಅನ್ವಷ್ಟಕಾ ದಶಸ್ಯುಃ ತಾಃ ಪಿತೃಕಾರ್ಯೇ ಮಹಾಫಲಾಃ ॥ ವರಾಹಪುರಾಣ/ಚಾ.ಮಾಸ.ಮ./ಅ. ೨೩.].

## [೭] ವ್ಯತೀಪಾತ [೧೨] ಮತ್ತು ವೈಧೃತಿ [೧೨] ಯೋಗಗಳು – ೨೪

ಸೂರ್ಯಚಂದ್ರಾದಿ ನವಗ್ರಹಗಳು, ಅಶ್ವಿನ್ಯಾದಿ ೨೭ನಕ್ಷತ್ರಗಳು, ಮೇಷಾದಿ ದ್ವಾದಶ ರಾಶಿಗಳು, ವಿಷ್ಕಂಭಾದಿ ೨೭ ಯೋಗಗಳು, ಬವಾದಿ ೧೧ ಕರಣಗಳನ್ನು ಶ್ರೀಹರಿಯು ಲೀಲೆಯಿಂದ ಸೃಷ್ಟಿಸಿದನು. ಈ ಗ್ರಹಾದಿ ಕರಣ ಪರ್ಯಂತ ಸಾವಿರಾರು ಸಂಖ್ಯೆಯಲ್ಲಿ ಪರ್ವಕಾಲಗಳು ಉಂಟಾಗುತ್ತದೆ. ೨೭ ಯೋಗಗಳಲ್ಲಿ ವ್ಯತೀಪಾತಯೋಗ ಮತ್ತು ವೈಧೃತಿಯೋಗಗಳು ಪರ್ವಕಾಲವೆನಿಸಿಕೊಳ್ಳುತ್ತದೆ. [ ಸೂರ್ಯಚಂದ್ರೌ ಕುಜಃ ಸೌಮ್ಯೋ ಗುರುಃ ಶುಕ್ರಃ ಶನಿಸ್ತಥಾ। ಗ್ರಹಾಃ ಸಪ್ತೈವ ಭುಜವೋ ರಾಮಕೇತೂ ಚ ವಕ್ರಗೌ॥ ...........ವಿಷ್ಕಂಭಾದೀಂಸ್ತಥಾ ಯೋಗಾನ್ ಸಪ್ತವಿಂಶತಿ ಸಂಖ್ಯಯಾ। ಕರಣಾನಿ ದಶೈಕಂ ಚ ಸೃಷ್ಟವಾನ್ ಲೀಲಯಾ ಹರಿಃ॥ ಏತೇಷ್ವೇವ ಹಿ ಜಾಯಂತೇ ಪರ್ವಕಾಲಾಃ ಸಹಸ್ರಶಃ। ................ಯೋಗೇಷು ಪರ್ವಕಾಲಃ ಸ್ಯಾತ್ ವ್ಯತೀಪಾತಶ್ಚ ವೈಧೃತಿಃ ॥ ವರಾಹಪುರಾಣ ಚಾ.ಮಾಸ. ಮಹಾತ್ಮೆ/ಅಧ್ಯಾಯ೨೩– ಶ್ಲೋಕ ೪೭ ರಿಂದ ೬೫. ] ಎಂಬ ಪ್ರಮಾಣಾನುಸಾರ ಈ ಪರ್ವಕಾಲದಲ್ಲಿ ಪಿತೃಗಳನ್ನು ಉದ್ದೇಶಿಸಿ ನೀಡುವಂತಹದ್ದು ಅಕ್ಷಯ ಫಲಪ್ರದವಾಗಿರುತ್ತದೆ.

ಪಂಚಾಂಗದಲ್ಲಿ ಷಣ್ಣವತೀ [೯೬] ಶ್ರಾದ್ಧದಿನಗಳನ್ನು ೧. ಅಮಾವಾಸ್ಯೆಯಂದು ದರ್ಶ ತರ್ಪಣವೆಂದೂ,೨.ಯುಗಾದಿಗಳನ್ನು ಕೃತ, ತ್ರೇತಾ, ದ್ವಾಪರ, ಕಲಿ ಯುಗಾದಿ ಯೆಂದೂ, ೩ . ಮನ್ವಾದಿಗಳನ್ನು ಮನ್ವಾದಿಗಳೆಂದೂ, ೪ . ಸಂಕ್ರಾಂತಿಗಳನ್ನು ಮೇಷ,ವೃಷಭಾದಿ ಸಂಕ್ರಮಣವೆಂದೂ, ೫. ಮಹಾಲಯವನ್ನು ಪಿತೃಪಕ್ಷವೆಂದೂ, ೬. ಅನ್ವಷ್ಟಕಗಳನ್ನು ಇಲ್ಲಿ ತಿಳಿಸಿದ ಕೃಷ್ಣಪಕ್ಷದ ತಿಥಿಗಳಂದು, ೭ . ವ್ಯತೀಪಾತ, ವೈಧೃತಿ ಯೋಗಗಳನ್ನು ಅದೇ ಹೆಸರಿನಿಂದ ಉಲ್ಲೇಖಿಸಿರುತ್ತಾರೆ.

## ೧೯.ಋಗ್ವೇದಿ/ಯಜುರ್ವೇದಿ ದರ್ಶ[ಅಮಾವಾಸ್ಯೆ]ತರ್ಪಣದ ನಿಯಮ

ಅಮಾವಾಸ್ಯೆ [ದರ್ಶ ಶ್ರಾದ್ಧ ] ಕ್ಕೆ ಬರುವ ಪಿತೃಗಳನ್ನು ೧. ಪಿತೃವರ್ಗ, ೨. ಮಾತೃವರ್ಗ, ೩. ಮಾತಾಮಹವರ್ಗ, ೪. ಮಾತಾಮಹಿವರ್ಗ ಎಂಬ ನಾಲ್ಕು ವರ್ಗಗಳಲ್ಲಿ ವಿಂಗಡಿಸಿದ್ದಾರೆ.

೧. ಪಿತೃವರ್ಗದಲ್ಲಿ – ತಂದೆ [ ಪಿತೃ ], ತಂದೆಯತಂದೆ [ ಪಿತಾಮಹ ] ತಂದೆಯ ತಂದೆಯ ತಂದೆ [ ಪ್ರಪಿತಾಮಹ ] ತಂದೆ, ತಾತ, ಮುತ್ತಾತ ತನ್ನ ತಂದೆಯಿಂದ ಮುತ್ತಾತನವರೆಗಿನ ಮೂರು ಜನ ಬರುತ್ತಾರೆ. [ ತಂದೆ, ತಾತ ಮತ್ತು ಮುತ್ತಾತ. ]

೨. ಮಾತೃವರ್ಗದಲ್ಲಿ – ತಾಯಿ [ ಮಾತಾ ], ತಂದೆಯ ತಾಯಿ [ ಪಿತಾಮಹಿ] ತಂದೆಯ ತಂದೆಯ ತಾಯಿ [ ಪ್ರಪಿತಾಮಹಿ ], ಅಂದರೆ ತನ್ನ ತಾಯಿಯ ಅತ್ತೆ, ಮತ್ತು ತಾಯಿಯ ಅತ್ತೆಯ ಅತ್ತೆಯವರೆಗಿನ ಮೂರು ಜನ ಬರುತ್ತಾರೆ. ತನ್ನ ತಾಯಿ, ತಂದೆಯ ಕಡೆಯ ಅಜ್ಜಿ ಮತ್ತು ಮುತ್ತಜ್ಜಿ .

೩. ಮಾತಾಮಹವರ್ಗ – ತಾಯಿಯ ತಂದೆ [ ಮಾತಾಮಹ ] , ತಾಯಿಯ ತಂದೆಯ ತಂದೆ [ ಮಾತುಃಪಿತಾಮಹ ], ಮತ್ತು ತಾಯಿಯ ತಂದೆಯ ತಂದೆಯ ತಂದೆ [ ಮಾತುಃಪ್ರಪಿತಾಮಹ ]. ತನ್ನ ತಾಯಿಯ ಕಡೆಯ ತಾತ, ಮುತ್ತಾತ, ಹಾಗೂ ಮುತ್ತಾತನ ತಂದೆ.

೪. ಮಾತಾಮಹಿವರ್ಗ – ತಾಯಿಯ ತಾಯಿ [ ಮಾತಾಮಹಿ ], ತಾಯಿಯ ತಾಯಿಯ ಅತ್ತೆ [ ಮಾತುಃಪಿತಾಮಹಿ ], ತಾಯಿಯ ಅಜ್ಜಿಯ ಅತ್ತೆ. [ ಮಾತುಃಪ್ರಪಿತಾಮಹಿ ] ಅಂದರೆ ತನ್ನ ತಾಯಿಯ ತಾಯಿ, ತಾಯಿಯ ತಾಯಿಯ ತಾಯಿ, ಮತ್ತು ತಾಯಿಯ ತಾಯಿಯ ತಾಯಿಯ ತಾಯಿ.

ಈ ನಾಲ್ಕು ವರ್ಗದಲ್ಲಿ ಬರುವ ಹನ್ನೆರಡು ಜನರನ್ನು ದ್ವಾದಶ ಪಿತೃಗಳೆಂದು ಕರೆಯುತ್ತಾರೆ. ಇವರೆಲ್ಲರೂ ಮೃತರಾಗಿದ್ದರೆ ಸಂಕಲ್ಪದಲ್ಲಿ ಅಸ್ಮತ್ ಪಿತ್ರಾದಿ ದ್ವಾದಶ ಪಿತೄಣಾಂ ಅಥವಾ ಅಸ್ಮತ್ ಸಪತ್ನೀಕ ಷಟ್ಪಿತೄಣಾಂ ಅಂತ ಸಂಕಲ್ಪ ಮಾಡಬೇಕು. ತರ್ಪಣ ಕರ್ತೃವಿಗೆ ತಾಯಿಯು ಮೃತಳಾಗಿದ್ದರೂ ತಂದೆಯ ಮರಣಾನಂತರವೇ ತರ್ಪಣಾಧಿಕಾರ ಬರುತ್ತದೆ. ತಂದೆ ಬದುಕ್ಕಿದ್ದಾಗ ತಿಲತರ್ಪಣಾಧಿಕಾರವಿಲ್ಲವೆಂಬ ವ್ಯಾಸ [ ವ್ಯಾಸಃ – ನ ಜೀವತ್ಪಿತೃಕಃ ಕುರ್ಯಾತ್ತಿಲೈಃ ಕೃಷ್ಣೈಸ್ತು ತರ್ಪಣಂ । ] ವಾಕ್ಯವನ್ನು ಇಲ್ಲಿ ಸ್ಮರಿಸಬಹುದು.

ಪಿತೃವರ್ಗದಲ್ಲಿ ತಂದೆ ಮೃತನಾಗಿ ತಾತ [ ತಂದೆಯ ತಂದೆ ] ಜೀವಂತವಿದ್ದರೆ **ದ್ವೌ ಪಿಂಡೌ ಏಕ ನಾಮಾನೌ ಏಕಸ್ಮಿನ್ ಪ್ರಪಿತಾಮಹ** ಎಂಬ ಪ್ರಮಾಣ ವಚನ ರೀತ್ಯಾ ಜೀವಂತ ಇರುವವರನ್ನು ಬಿಟ್ಟು [ ಅಂದರೆ ಜೀವಂತ ಇರುವ ತಾತನನ್ನು ಬಿಟ್ಟು ] ತಾತನ ಸ್ಥಾನದಲ್ಲಿ ತಂದೆಯ ನಾಮವನ್ನೇ [ ಹೆಸರನ್ನೇ ] ರುದ್ರ ರೂಪ ಅಂತರ್ಯಾಮಿ ರೂಪ ಸಂಕರ್ಷಣನೊಂದಿಗೆ ತರ್ಪಣಕ್ಕೆ ಗ್ರಹಿಸಬೇಕು. ಗತಿಸಿರುವ ಮುತ್ತಾತ [ಪ್ರಪಿತಾಮಹ]ನಿಗೆ ಆದಿತ್ಯ ರೂಪ/ ವಾಸುದೇವ ಎಂದು ತರ್ಪಣ ನೀಡಬೇಕು. ಇದೇ ಕ್ರಮವು ಮಾತೃವರ್ಗ [ತನ್ನ ತಾಯಿಯ ಅತ್ತೆ–ಕರ್ತೃವಿನ ತಂದೆಯ ತಾಯಿ] ದಲ್ಲಿ ಬರುತ್ತದೆ.

೧. ಅಸ್ಮತ್ ಪಿತುಃ .......................... [ ಮೃತ ತಂದೆಯ ಹೆಸರನ್ನು ಹೇಳಿ] ಶರ್ಮಾಣಂ, ......................... ಗೋತ್ರಂ,ವಸುರೂಪಂ ತದಂತರ್ಯಾಮಿ ಭಾರತೀರಮಣಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾನಮಃ ೧. ತರ್ಪಯಾಮಿ, ೨. ತರ್ಪಯಾಮಿ, ೩. ತರ್ಪಯಾಮಿ

ನಂತರ ತಾತ [ತಂದೆಯ ತಂದೆ] ಬದುಕಿರುವುದರಿಂದ ತಾತನ [ಪಿತಾಮಹ] ಸ್ಥಾನದಲ್ಲಿ ಪುನಃ ತನ್ನ ತಂದೆಯ ಹೆಸರನ್ನೇ ಹೇಳಿ ರೂಪದ ಸ್ಥಾನದಲ್ಲಿ ರುದ್ರ ರೂಪಂ ತದಂತಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಸಂಕರ್ಷಣಂ ಎಂದು ಈ ಕೆಳಗಿನಂತೆ ಹೇಳಬೇಕು.

೨. ಅಸ್ಮತ್ ಪಿತುಃ ,............................. [ ಮೃತ ತಂದೆಯ ಹೆಸರನ್ನು ಹೇಳಿ] ಶರ್ಮಾಣಂ, .................................. ಗೋತ್ರಂ, ರುದ್ರ ರೂಪಂ ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಸಂಕರ್ಷಣಂ ಸ್ವಧಾನಮಃ ೧. ತರ್ಪಯಾಮಿ, ೨. ತರ್ಪಯಾಮಿ, ೩.ತರ್ಪಯಾಮಿ

ಪ್ರಪಿತಾಮಹನ [ ಮುತ್ತಾತ ] ಸ್ಥಾನದಲ್ಲಿ ಏನೂ ವ್ಯತ್ಯಾಸವಿಲ್ಲ.

೩. ಅಸ್ಮತ್ ಪ್ರಪಿತಾಮಹಂ.................. ಶರ್ಮಾಣಂ [ಮುತ್ತಾತನ ಹೆಸರು] ..................................ಗೋತ್ರಂ,[ಗೋತ್ರ], ಆದಿತ್ಯರೂಪಂ ಸ್ವಧಾನಮಃ ೧. ತರ್ಪಯಾಮಿ, ೨. ತರ್ಪಯಾಮಿ, ೩.ತರ್ಪಯಾಮಿ.

ಪಿತೃವರ್ಗದ ಮೇಲಿನ ನಿಯಮ ಮಾತಾಮಹ ವರ್ಗದವರಿಗೆ ಅನ್ವಯಿಸುವುದಿಲ್ಲ. ತಂದೆ ತಾಯಿ ಇಬ್ಬರೂ ಮೃತರಾಗಿ ತಾಯಿಯ ತಂದೆ, ಅಥವಾ ತಾಯಿಯ ತಾಯಿ ಜೀವಂತವಾಗಿದ್ದರೆ [ಮಾತಾಮಹ, ಮಾತಾಮಹಿವರ್ಗಕ್ಕೆ] ತರ್ಪಣ ಮುಟ್ಟುವುದಿಲ್ಲ.

ತಾಯಿಯತಂದೆ [ ಮಾತಾಮಹ ] ಜೀವಂತವಿದ್ದರೆ ಸಂಕಲ್ಪ ಮಾಡುವಾಗ **ಅಸ್ಮತ್ ಪಿತ್ರಾದಿ ದ್ವಾದಶ ಪಿತ್ಯಾಣಾಂ ಮಧ್ಯೇ ಮಾತಾಮಹವರ್ಗಂ ಪರಿತ್ಯಜ್ಯ ಇತರೇಷಾಂ ಪಿತ್ಯಾಣಾಂ** [ ಅರ್ಥ– ದ್ವಾದಶ ಪಿತೃವರ್ಗದಲ್ಲಿ ತಾಯಿಯ ವರ್ಗದ ಪಿತೃಗಳನ್ನು ಬಿಟ್ಟು ] ಎಂದು ಸಂಕಲ್ಪ ಮಾಡಬೇಕು.

ಮಾತಾಮಹ ವರ್ಗದಲ್ಲಿ ತಾಯಿಯ ತಂದೆ ಮತ್ತು ತಾಯಿ ಮೃತರಾಗಿ [ ಮಾತಾಮಹ ಮಾತಾಮಹಿ ] , ಮಾತುಃ ಪಿತಾಮಹಿ ಅಥವಾ ಮಾತುಃ ಪಿತಾಮಹತಾಯಿಯ ಅಜ್ಜ, ಅಜ್ಜಿ ] ಯಲ್ಲಿ ಯಾರೊಬ್ಬರು ಜೀವಂತವಾಗಿದ್ದರೂ ತಾಯಿಯ ತಂದೆ ಹಾಗೂ ತಾಯಿಗೆ ಮಾತ್ರ ತರ್ಪಣ ನೀಡಬೇಕು ಹೊರತಾಗಿ **ಪಿತೃವರ್ಗದಲ್ಲಿದ್ದಂತೆ [ ತಾತ ಜೀವಂತವಿದ್ದು ತಂದೆ ಮೃತನಾದಾಗ ] ನೀಡಬಾರದು.** ತಂದೆಯ ಅಕ್ಕ [ಸೋದರತ್ತೆ] ಯಿದ್ದು ಮಾವಕಾಲವಾಗಿದ್ದರೆ ತರ್ಪಣ ನೀಡಲು ಬರುವುದಿಲ್ಲ. ಎಂದರೆ ಕರ್ತೃವಿಗೆ ನೇರಸಂಬಂಧಿಗಳ ಕಾಲವಾದನಂತರ ತರ್ಪಣ ಹುಟ್ಟುತ್ತದೆ. ಅದೇ ಉಪನೀತನಾದ ಇವರಮಗ ಕಾಲವಾಗಿದ್ದರೆ ತರ್ಪಣಕ್ಕೆ ಬರುತ್ತಾನೆ.

---

**ಷಣ್ಣವತಿನಾಮಕನು ವಸು ಮೂ । ಗಣ್ಣ ಭಾಸ್ಕರರೊಳಗೆ ನಿಂತು ಪ್ರ। ಪನ್ನರನುದಿನ ನಿಷ್ಕಪಟ ಸದ್ಭಕ್ತಿಯಲಿ ಮಾಳ್ಪ ।। ಪುಣ್ಯಕರ್ಮವ ಸ್ವೀಕರಿಸಿ ಕಾ । ರುಣ್ಯಸಾಗರನಾ ಪಿತೃಗಳಿಗ । ಗಣ್ಯ ಸುಖವಿತ್ತವರ ಪೊರೆವನು ಎಲ್ಲ ಕಾಲದಲಿ ।। ಶ್ರೀಮದ್ಧರಿಕಥಾಮೃತಸಾರ ಭೋಜನರಸ ವಿಭಾಗ ಸಂಧಿ ।।೨೨।।**

## ಋಗ್ವೇದಿ/ಯಜುರ್ವೇದಿ ದರ್ಶ ತರ್ಪಣ ನೀಡುವ ಕ್ರಮ

ಮೊದಲು ಎರಡು ಬಾರಿ ಆಚಮನ ಮಾಡಬೇಕು, ಓಂ ಶ್ರೀ ಕೇಶವಾಯಸ್ವಾಹಾ, ಓಂ ಶ್ರೀ ನಾರಾಯಣಾಯ ಸ್ವಾಹಾ, ಓಂ ಶ್ರೀ ಮಾಧವಾಯ ಸ್ವಾಹಾ, ಓಂ ಶ್ರೀ ಗೋವಿಂದಾಯ ನಮಃ, ಓಂ ಶ್ರೀ ವಿಷ್ಣವೇ ನಮಃ, ಓಂ ಶ್ರೀ ಮಧುಸೂದನಾಯ ನಮಃ, ಓಂ ಶ್ರೀ ತ್ರಿವಿಕ್ರಮಾಯ ನಮಃ, ಓಂ ಶ್ರೀ ವಾಮನಾಯ ನಮಃ, ಓಂ ಶ್ರೀ ಶ್ರೀಧರಾಯ ನಮಃ, ಓಂ ಶ್ರೀ ಹೃಷೀಕೇಶಾಯ ನಮಃ, ಓಂ ಶ್ರೀ ಪದ್ಮನಾಭಾಯ ನಮಃ, ಓಂ ಶ್ರೀ ದಾಮೋದರಾಯ ನಮಃ, ಓಂ ಶ್ರೀ ಸಂಕರ್ಷಣಾಯ ನಮಃ, ಓಂ ಶ್ರೀ ವಾಸುದೇವಾಯ ನಮಃ, ಓಂ ಶ್ರೀ ಪ್ರದ್ಯುಮ್ನಾಯ ನಮಃ, ಓಂ ಶ್ರೀ ಅನಿರುದ್ಧಾಯ ನಮಃ, ಓಂ ಶ್ರೀ ಪುರುಷೋತ್ತಮಾಯ ನಮಃ, ಓಂ ಶ್ರೀ ಅಧೋಕ್ಷಜಾಯ ನಮಃ, ಓಂ ಶ್ರೀ ನಾರಸಿಂಹಾಯ ನಮಃ, ಓಂ ಶ್ರೀ ಅಚ್ಯುತಾಯ ನಮಃ, ಓಂ ಶ್ರೀ ಜನಾರ್ದನಾಯ ನಮಃ, ಓಂ ಶ್ರೀ ಉಪೇಂದ್ರಾಯ ನಮಃ, ಓಂ ಶ್ರೀ ಹರಯೇ ನಮಃ, ಓಂ ಶ್ರೀ ಕೃಷ್ಣಾಯ ನಮಃ ॥

ನಂತರ ಪವಿತ್ರವನ್ನು ಆಚಾರ್ಯರಿಂದ [ ಆಚಾರ್ಯರಿಲ್ಲದಿದ್ದರೆ ಕೈಯಲ್ಲಿ ಹಿಡಿದು ] ಸ್ವೀಕರಿಸಿ, ಮುಂದಿನಮಂತ್ರ [ ಹೇಳಿ] ಪೂರ್ಣವಾದ ಮೇಲೆ ಧರಿಸಬೇಕು.

**ಋಗ್ವೇದಿಗಳು** – ಓಂ ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ ಪ್ರಭುರ್ಗಾತ್ರಾಣಿ ಪರ್ಯೇಷಿ ವಿಶ್ವತಃ । ಅತಪ್ತತನೂರ್ನ ತದಾಮೋ ಅಶ್ನುತೇ ಶೃತಾಸ ಇದ್ವಹಂತಸ್ತತ್ ಸಮಾಶತ ॥

**ಯಜುರ್ವೇದಿಗಳು** – ಓಂ ಪವಿತ್ರವಂತಃ ಪರಿ ವಾಚಮಾಸತೇ ಪಿತೈಷಾಂ ಪ್ರತ್ನೋ ಅಭಿ ರಕ್ಷತಿ ವ್ರತಮ್ । ಮಹಸ್ಸಮುದ್ರಂ ವರುಣಸ್ತಿರೋದಧೇ ಧೀರಾ ಇಚ್ಛೇಕುರ್ಧರುಣೇಷ್ವಾರಭಮ್ ॥

ಪವಿತ್ರವು ದೊರೆಯದಿದ್ದರೆ ಸಂಧ್ಯಾವಂದನೆ, ತರ್ಪಣವೇ ಮೊದಲಾದ ಕರ್ಮಗಳಲ್ಲಿ ದರ್ಭೆ, ಎಳ್ಳಿನ ಅಭಾವವಿದ್ದರೆ ನಿರ್ಮಾಲ್ಯ ತುಳಸೀಯಿಂದ ಆ

ಕರ್ಮಗಳನ್ನು ಮಾಡಿದಾಗ ಫಲಪ್ರದವಾಗುತ್ತದೆ [ ಸಂಧ್ಯಾಯಾ ವಂದನೇ ಚಾಪಿ ತರ್ಪಣಾದಿಕ ಕರ್ಮಸು। ದರ್ಭಾಭಾವೇ ತಿಲಾಭಾವೇ ತುಲಸ್ಯೇವ ಫಲಪ್ರದಾ॥ ] ಎಂಬ ಪ್ರಮಾಣಾನುಸಾರ ನಿರ್ಮಾಲ್ಯತುಳಸಿಯನ್ನು ಪವಿತ್ರದ [ಉಂಗುರದ] ಬೆರಳಿನಲ್ಲಿ ಹಿಡಿದುಕೊಳ್ಳಬೇಕು. ಪುನಃ ಆಚಮನ ಮಾಡಬೇಕು.

ಪ್ರಾಣಾಯಾಮ – ಪ್ರಣವಸ್ಯ ಪರಬ್ರಹ್ಮಋಷಿಃ, ಪರಮಾತ್ಮಾ ದೇವತಾ, ದೇವೀ ಗಾಯತ್ರೀ ಛಂದಃ, ಪ್ರಾಣಾಯಾಮೇ ವಿನಿಯೋಗಃ, ಓಂ ಭೂಃ, ಓಂ ಭುವಃ, ಓ ಸ್ವಃ, ಓಂ ಮಹಃ, ಓಂ ಜನಃ, ಓಂ ತಪಃ, ಓಂ ಸತ್ಯಂ, ಓಂ ತತ್ಸವಿತುರ್ವರೇಣ್ಯಂ, ಭರ್ಗೋ ದೇವಸ್ಯ ಧೀಮಹಿ, ಧಿಯೋ ಯೋ ನಃ ಪ್ರಚೋದಯಾತ್। ಓಮಾಪೋಜ್ಯೋತೀರಸೋಽಮೃತಂ ಬ್ರಹ್ಮಭೂರ್ಭುವಃ ಸ್ವರೋಮ್ ॥

ಸಂಕಲ್ಪ – ಶ್ರೀ ಗೋವಿಂದ ಗೋವಿಂದ ಗೋವಿಂದ ಶ್ರೀವಿಷ್ಣೋ ರಾಜ್ಞಯಾ ಪ್ರವರ್ತಮಾನಸ್ಯ ಆದ್ಯಬ್ರಹ್ಮಣಃ ದ್ವಿತೀಯಪರಾರ್ಧೇ ಶ್ವೇತವರಾಹಕಲ್ಪೇ ವೈವಸ್ವತಮನ್ವಂತರೇ ಕಲಿಯುಗೇ ಪ್ರಥಮಪಾದೇ ಭರತವರ್ಷೇ ಭರತಖಂಡೇ ಜಂಬೂದ್ವೀಪೇ ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣೇತೀರೇ ಶಾಲಿವಾಹನಶಕೇ ಬೌದ್ಧಾವತಾರೇ ರಾಮಕ್ಷೇತ್ರೇ ಅಸ್ಮಿನ್ ವರ್ತಮಾನೇ ಚಾಂದ್ರಮಾನೇನ ............................ ಸಂವತ್ಸರೇ, ದಕ್ಷಿಣಾಯನೇ [ಉತ್ತರಾಯಣೇ] ................. ಋತೌ, ..............ಮಾಸೇ, ಶುಕ್ಲಪಕ್ಷೇ [ ಕೃಷ್ಣಪಕ್ಷೇ ] , .........ತಿಥೌ, ........... ವಾಸರಯುಕ್ತಾಯಾಂ ವಿಷ್ಣುನಕ್ಷತ್ರ, ವಿಷ್ಣುಯೋಗ, ವಿಷ್ಣುಕರಣ ಏವಂಗುಣ ವಿಶೇಷಣ ವಿಶಿಷ್ಟಾಯಾಂ ಪುಣ್ಯತಿಥೌ[ಇಲ್ಲಿಯವರೆಗೂ ಪೂರ್ವದಿಕ್ಕಿಗೆಮುಖಮಾಡಿ ಕುಳಿತಿರಬೇಕು] ನಂತರ ಪ್ರಾಚೀನಾವೀತಿ[ ಜನಿವಾರವನ್ನು ಬಲಭುಜದಮೇಲೆ ಬರುವಂತೆ ಅಂದರೆ ಎಡಭುಜ ಬಿಟ್ಟಿರುವಂತೆ ಹಾಕಿಕೊಂಡು ] , ದಕ್ಷಿಣದಿಕ್ಕಿಗೆ ತಿರುಗಿ, ಎಡಗಾಲನ್ನು ಹಿಂದಕ್ಕೆ ಮಡಚಿ ಬಲಗಾಲನ್ನೂರಿ ಕುಳಿತುಕೊಳ್ಳುವುದು. [ ತೌಳವ ಪಾಠ – ಶ್ರೀಮನ್ಮಧ್ವಾಚಾರ್ಯಾಣಾಂ ಹೃತ್ಕಮಲಮಧ್ಯನಿವಾಸಿ ವಾಸುದೇವ ಸಂಕರ್ಷಣ ಪ್ರದ್ಯುಮ್ನಾನಿರುದ್ಧ ಚತುರ್ಮೂರ್ತ್ಯಾದ್ಯನಂತಾವತಾರಾತ್ಮಕ ಪಿತೃ, ಪಿತಾಮಹ, ಪ್ರಪಿತಾಮಹಾಂತರ್ಯಾಮಿ ಪ್ರದ್ಯುಮ್ನ, ಸಂಕರ್ಷಣ, ವಾಸುದೇವಾತ್ಮಕ ಶ್ರಾದ್ಧಸ್ವಾಮಿ ಶ್ರೀಲಕ್ಷ್ಮೀಜನಾರ್ದನ ಪ್ರೇರಣಯಾ ಶ್ರೀಲಕ್ಷ್ಮೀಜನಾರ್ದನ ಪ್ರೀತ್ಯರ್ಥಂ ] **ಇಲ್ಲಿಂದಮುಂದಕ್ಕೆ ನಾವು ತರ್ಪಣ ನೀಡುವ ಸಂದರ್ಭಕ್ಕೆ**

**ಅನುಸಾರವಾಗಿ ಸಂಕಲ್ಪವನ್ನು ಹೇಳಿಕೊಳ್ಳಬೇಕು.**

**೧. *ಅಮಾವಾಸ್ಯೆ [ದರ್ಶ] ನಿಮಿತ್ತ ತರ್ಪಣಕ್ಕೆ*** – ಪಿತೃ, ಪಿತಾಮಹ, ಪ್ರಪಿತಾಮಹಾಂತರ್ಯಾಮಿ ವಸುರುದ್ರಾದಿತ್ಯಾಂತರ್ಗತ ಮನುನಾಮಕ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀಮಧ್ವವಲ್ಲಭ ಜನಾರ್ದನ ವಾಸುದೇವ ಪ್ರೇರಣಯಾ ಶ್ರೀಮಧ್ವವಲ್ಲಭ ಜನಾರ್ದನ ವಾಸುದೇವ ಪ್ರೀತ್ಯರ್ಥಂ ಪಿತೄಣಾಂ ಅಕ್ಷಯಪುಣ್ಯಲೋಕಾವಾಪ್ತ್ಯರ್ಥಂ ದರ್ಶನಿಮಿತ್ತ ತಿಲತರ್ಪಣಂ ಕರಿಷ್ಯೇ ಎಂದು ಎಳ್ಳು ನೀರನ್ನು ತರ್ಪಣ ನೀಡುವ ಪಾತ್ರೆಗೆ ಬಿಡಬೇಕು.

***ಋಗ್ವೇದಿಗಳು.*** ೧.ಸಪತ್ನೀಕಪಟ್ಟಿತುಃ.........................................
..........................................ಶರ್ಮಾಣಂ[ತಂದೆಯುಹೆಸರು]
..........................................ಗೋತ್ರಂ [ಗೋತ್ರ] ವಸುರೂಪಂ ತದಂತರ್ಯಾಮಿ ಭಾರತೀರಮಣಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂಸ್ವಧಾನಮಃ ೧. ತರ್ಪಯಾಮಿ, ೨. ತರ್ಪಯಾಮಿ, ೩.ತರ್ಪಯಾಮಿ [ಮೂರು ಬಾರಿ].

೨. ಸಪತ್ನೀಕಪಟ್ಟಿತಾಮಹಂ ..........................................
ಶರ್ಮಾಣಂ[ತಾತನಹೆಸರು]..........................................
..............................ಗೋತ್ರಂ[ಗೋತ್ರ] ರುದ್ರರೂಪಂ ತದಂತರ್ಯಾಮಿ ಭಾರತೀರಮಣಮುಖ್ಯಪ್ರಾಣಾಂತರ್ಗತ ಸಂಕರ್ಷಣಂ ಸ್ವಧಾನಮಃ ೧. ತರ್ಪಯಾಮಿ, ೨. ತರ್ಪಯಾಮಿ, ೩. ತರ್ಪಯಾಮಿ [ಮೂರು ಬಾರಿ].

೩.ಸಪತ್ನೀಕಷಟ್‌ಪ್ರಪಿತಾಮಹಂ ..........................................
..........................................ಶರ್ಮಾಣಂ[ಮುತ್ತಾತನಹೆಸರು]
..........................................ಗೋತ್ರಂ[ಗೋತ್ರ] ಆದಿತ್ಯರೂಪಂ ತದಂತರ್ಯಾಮಿ ಭಾರತೀರಮಣಮುಖ್ಯಪ್ರಾಣಾಂತರ್ಗತ ವಾಸುದೇವಂ ಸ್ವಧಾನಮಃ ೧. ತರ್ಪಯಾಮಿ, ೨. ತರ್ಪಯಾಮಿ, ೩. ತರ್ಪಯಾಮಿ [ಮೂರು ಬಾರಿ].

[ಮಾತೃವರ್ಗದ ಆರುಜನ ] ೧.ಸಪತ್ನೀಕ ಮಾತಾಮಹಂ ..............................
..........................................ಶರ್ಮಾಣಂ[ತಾಯಿಯ ತಂದೆಯ ಹೆಸರು]
..............................ಗೋತ್ರಂ [ಗೋತ್ರ] ವಸುರೂಪಂ ತದಂತರ್ಯಾಮಿ ಭಾರತೀರಮಣಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾನಮಃ ೧. ತರ್ಪಯಾಮಿ, ೨. ತರ್ಪಯಾಮಿ, ೩. ತರ್ಪಯಾಮಿ [ಮೂರು ಬಾರಿ] .

